# SECOND CATECHISM

OF

# CANARESE GRAMMAR

FIFTH EDITION

# ಕನ್ನಡ ಬಾಲವ್ಯಾಕರಣ

ದ್ವಿತಿಯ ಪ್ರಶ್ನೋತ್ತರಸಂವಾದ

ಐದನೇ ಛಾಪೆ



MANGALORE
UBLISHED BY PFLEIDERER & RIEHM
SEL MISSION BOOK & TRACT DEPOSITORY
1867

ಕ್ರಯ ೨ ಆಣೆ. Price 2 As.

# SECOND CATECHISM

OF

# CANARESE GRAMMAR

# ಕನ್ನಡ ಬಾಲವ್ಯಾಕರಣ

ದ್ವಿತೀಯ ಪ್ರಶ್ನೋತ್ತರಸಂವಾದ

ಐದನೇ ಛಾಪೆ

MANGALORE
PRINTED BY PLEBST & STOLZ, BASEL MISSION PRESS
1867

SECOND CATECHISM

OF

# Canarese Grammar.

## ಕನ್ನಡ ವ್ಯಾಕರಣದ ಪ್ರಶ್ನೋತ್ತರ.

1. ಪ್ರಶ್ನೆ. ಕನ್ನಡ ವ್ಯಾಕರಣವೆಂದರೇನು?
ಉತ್ತರ. ಕನ್ನಡ ಭಾಷೆಯ ವಿಧಿಗಳ ವಿವರವು.

2. ಪ್ರ. ಅದಕ್ಕೆ ಭಾಗಗಳೆಷ್ಟು?
ಉ. "ಅಕ್ಷರಖಂಡ, ಶಬ್ದಖಂಡ, ವಾಕ್ಯಖಂಡ" ಎಂಬ ಈ ಮೂರು.

## ಮೊದಲನೇ ಭಾಗ.

# ಅಕ್ಷರ ಖಂಡ.

### 1. ಸಂಜ್ಞಾಪ್ರಕರಣ.

3. ಪ್ರ. ಅಕ್ಷರವೆಂದರೇನು?
ಉ. ಮಾತಾಡುವದರಲ್ಲಿ ಒಂದೇ ಉಚ್ಚಾರಣೆಯಿಂದ ಹುಟ್ಟುವ ಶಬ್ದವೂ ಅಂಥ ಶಬ್ದವನ್ನು ಬರೆಯುವದಕ್ಕೆ ಹಿರಿಯರು ಕಲ್ಪಿಸಿದ ಸಂಜ್ಞೆಯೂ "ಅಕ್ಷರ"ವೆಂದೆನ್ನಿಸುವದು.

4. ಪ್ರ. ಕನ್ನಡ ಅಕ್ಷರಗಳು ಎಷ್ಟು ವಿಧವು?
ಉ. "ವರ್ಣಾಕ್ಷರಗಳು, ಕಾಗುಣಿತಾಕ್ಷರಗಳು, ವತ್ತಕ್ಷರಗಳು," ಈ 3 ವಿಧವು.

5. ಪ್ರ. ವರ್ಣಗಳು ಯಾವವು?

ಉ. ಸಂಸ್ಕೃತ ಅಕ್ಷರಮಾಲೆಗೆ ಅನುಸಾರವಾಗಿ 52 ವರ್ಣಗಳೆಂದು ವರ್ತನೆ ಉಂಟು; ಅವು ಯಾವವಂದರೆ:

ಅ ಆ ಇ ಈ ಉ ಊ
ಋ ೠ ಌ (ന) ೡ
ಎ ಏ ಐ ಒ ಓ ಔ

---

ಅಂ ಅಃ

---

ಕ ಖ ಗ ಘ (ಘ) ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ (ಭ) ಮ

---

ಯ ರ ಲ ವ
ಶ ಷ(ಷ)ಸ ಹ(ಹ) ಳ

---

6. ಪ್ರ. ಈ 52 ವರ್ಣಗಳೆಲ್ಲಾ ಈಗಿನ ಕನ್ನಡದಲ್ಲಿ ಪ್ರಯೋಗವಾಗುತ್ತವೊ?

ಉ. "ೠ, ಌ, ೡ, ಙ," ಈ 4 ವರ್ಣಗಳಿಗೆ ಈಗಿನ ಕನ್ನಡದಲ್ಲಿ ಅಗದಿ ಪ್ರಯೋಗವಿಲ್ಲ. ಅವುಗಳ ಬದಲಾಗಿ ಜನರು "ರೂ, ಲು, ಲೂ" ಬರೆಯುತ್ತಾರೆ. "ಇ ಈ, ಉ ಊ, ಋ, ಎ ಏ ಐ, ಒ ಓ ಔ" ಇವು 11 ವರ್ಣಗಳು ಗ್ರಂಥದಲ್ಲಿ ಇದ್ದಾಗ್ಯೂ, ಜನರು ಬಹಳ ಸರ್ತಿ ಅವುಗಳ ಬದಲಾಗಿ—"ಯಿ ಯಿೂ, ವು ವೂ, ರು, ಯ (ಯೆ) ಯೇ, ಅಯ್ಯ, ವ (ವೊ), ವೋ, ಅವು"—ಬರೆಯುತ್ತಾರೆ.

7. ಪ್ರ. ಒಂದೊಂದು ವರ್ಣದ ಹೆಸರನ್ನು ಅನ್ನುವ ಹಾಗೆ ಅದಕ್ಕೆ ಏನು ಕೂಡಿಸುತ್ತಾರೆ?
ಉ. "ಕಾರ"ವೆಂಬ ಶಬ್ದವನ್ನು ಕೂಡಿಸುತ್ತಾರೆ. ಉದಾಹರಣೆ. ಅ ಕಾರ, ಇ ಕಾರ, ಕ ಕಾರ, ಮ ಕಾರ,— ಇತ್ಯಾದಿ.

8. ಪ್ರ. ವರ್ಣಗಳಲ್ಲಿ ಭೇದಗಳು ಎಷ್ಟು?
ಉ. "ಸ್ವರಗಳು, ವ್ಯಂಜನಗಳು," ಈ 2 ಭೇದಗಳು.

9. ಪ್ರ. ಸ್ವರಗಳು ಯಾವವು?
ಉ. ಅ ಕಾರ ಹಿಡಿದು ಔ ಕಾರದ ವರೆಗೆ 16 ಸ್ವರಗಳು.

10. ಪ್ರ. ವ್ಯಂಜನಗಳು ಯಾವವು?
ಉ. ಕ ಕಾರ ಹಿಡಿದು ಳ ಕಾರದ ವರೆಗೆ 34 ವ್ಯಂಜನಗಳು.

11. ಪ್ರ. ಸ್ವರಗಳು ಎಷ್ಟು ವಿಧವು?
ಉ. "ಹ್ರಸ್ವ, ದೀರ್ಘ" ಎಂಬ 2 ವಿಧವು.
"ಅ ಇ ಉ ಋ ಎ ಒ" ಇವು ಹ್ರಸ್ವಗಳು.
"ಆ ಈ ಊ ಏ ಐ ಓ ಔ" ಇವು ದೀರ್ಘಗಳು.

12. ಪ್ರ. ವ್ಯಂಜನಗಳು ಎಷ್ಟು ವಿಧವು?
ಉ. "ವರ್ಗೀಯಗಳು, ಅವರ್ಗೀಯಗಳು", ಈ 2 ವಿಧವು. ವರ್ಗೀಯಗಳು ಯಾವವಂದರೆ—"ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ," ಈ 5 ವರ್ಗೀಯಗಳು. ಅವರ್ಗೀಯಗಳು ಯಾವವಂದರೆ—"ಯ ರ ಲ ವ, ಶ ಷ ಸ ಹ," ಈ 2 ಗುಂಪುಗಳು.

13. ಪ್ರ. ವರ್ಗೀಯಗಳ ಒಂದೊಂದು ವರ್ಗದ ವರ್ಣಗಳು ಎಷ್ಟು ವಿಧವು.
ಉ. ಒಂದೊಂದು ವರ್ಗಕ್ಕೆ 5 ವರ್ಣಗಳು. ಅವುಗಳಲ್ಲಿ 2 ಪರುಷ, 2 ಸರಳ, 1 ಅನುನಾಸಿಕ. ಪರುಷ ವ್ಯಂಜನಗಳಲ್ಲಿಯೂ ಸರಳ ವ್ಯಂಜನಗಳಲ್ಲಿಯೂ 1ನೇದು ಅಲ್ಪಪ್ರಾಣವೆಂದೂ, 2ನೇದು ಮಹಾಪ್ರಾಣವೆಂದೂ ಎನ್ನಿಸುವದು.

14. ಪ್ರ. ಸೊನ್ನೆಗೆ (೦) ಹೆಸರೇನು?
ಉ. ಅದಕ್ಕೆ "ಅನುಸ್ವಾರ"ವೆಂದೂ, "ಬಿಂದು"ವೆಂದೂ ಹೆಸರು.

15. ಪ್ರ. ಅದರ ಉಚ್ಚಾರಣೆ ಹ್ಯಾಗೆ?
ಉ. ಬಿಂದು ಯಾವ ವ್ಯಂಜನದ ಮೊದಲು ಬರದದೆಯೋ, ಆ ವ್ಯಂಜನದ ವರ್ಗದ ಅನುನಾಸಿಕದ ಹಾಗೆ ಉಚ್ಚಾರಣೆ ಆಗುವದು. ಅವರ್ಗೀಯಗಳ ಮೊದಲು ಮಾತ್ರ ಅದಕ್ಕೆ ಶುದ್ಧ ಅನುಸ್ವಾರದ ಉಚ್ಚಾರಣೆ ಬರುವದು.

16. ಪ್ರ. ಎರಡು ಸೊನ್ನೆಗೆ (ಃ) ಹೆಸರೇನು?
ಉ. ಅದಕ್ಕೆ "ವಿಸರ್ಗ"ವೆಂಬ ಹೆಸರು.

17. ಪ್ರ. ಕಾಗುಣಿತಾಕ್ಷರಗಳು ಯಾವವು?
ಉ. ವ್ಯಂಜನಗಳಿಗೆ ಸ್ವರಗಳು ಶೇರಿದ್ದರಿಂದ ಹುಟ್ಟಿದ ಅಕ್ಷರಗಳೆಲ್ಲಾ ಕಾಗುಣಿತಾಕ್ಷರಗಳೇ. ಉದಾ. ಕ ಕಾ ಕಿ ಕೀ ಕು ಕೂ ಕೃ ಕೆ ಕೇ ಕೈ ಕೊ (ಕಾ) ಕೋ (ಕಾ) ಕೌ.

18. ಪ್ರ. ವ್ಯಂಜನಕ್ಕೆ ಸ್ವರವಿಲ್ಲವೆಂಬುವದಕ್ಕೆ ಸಂಜ್ಞೆ ಏನು?
ಉ. ಒಂದು ವ್ಯಂಜನವನ್ನು ಸ್ವರವಿಲ್ಲದೆ ಉಚ್ಚರಿಸ ಬೇಕೆಂದು ತೋರಿಸುವದಕ್ಕೆ ಅದರ ತಲೆಕಟ್ಟಿಗೆ ಒಂದು ನಿಶಾನಿ ಹಚ್ಚುತ್ತಾರೆ. ಉದಾ. ಕ್ (ಕ), ಗ್ (ಗ), ದ್ (ದ), ಳ್ (ಳ). ಇಂಥಾ ವ್ಯಂಜನಗಳಿಗೆ "ಅರ್ಧಾಕ್ಷರ"ವೆಂಬ ಹೆಸರು.

19. ಪ್ರ. ವತ್ತಕ್ಷರಗಳು ಯಾವವು?
ಉ. ಎರಡು ವ್ಯಂಜನಗಳು ನಡುವೆ ಸ್ವರವಿಲ್ಲದೆ ಸಂಯೋಗವಾದರೆ, ಅವುಗಳಲ್ಲಿ ಒಂದನ್ನು ಮತ್ತೊಂದರ ಕೆಳಗೆ ಒತ್ತಾಗಿ ಬರೆಯುವದರಿಂದ ಅವುಗಳಿಗೆ "ಒತ್ತಕ್ಷರ"ವೆಂಬ ಹೆಸರು ಬಂದದೆ.

20. ಪ್ರ. ರೇಫವೆಂದು ಯಾವ ಅಕ್ಷರದ ಹೆಸರು?
ಉ. ರ ಕಾರಕ್ಕೆ ಮತ್ತೊಂದು ವ್ಯಂಜನ ಸಂಯೋಗವಾಗುವದರಲ್ಲಿ

ಆ ಎರಡನೇ ವ್ಯಂಜನವನ್ನು ಒತ್ತಕ್ಷರವಾಗಿ ರ ಕಾರದ ಕೆಳಗೆ ಬರೆಯದೆ, ರ ಕಾರವನ್ನು ಅದರ ತರುವಾಯ (ೕ) ಬರೆದು, ಅದಕ್ಕಿಂತ ಮುಂಚೆ ಉಚ್ಚರಿಸಿದರೆ "ರೇಫ"ವೆಂದು "ಅರ್ಕವತ್ತು" ಎಂದು ಎನ್ನಿಸಿಕೊಳ್ಳುವದು. ಉದಾ. (ಕಾರ್ಯ=) ಕಾರ್ಯ, ವರ್ಗ, ಮಾರ್ಗ.

---

## 2. ಸಂಧಿಪ್ರಕರಣ.

21. ಪ್ರ. ಸಂಧಿ ಎಂದರೇನು?

ಉ. ಪೂರ್ವಶಬ್ದದ ಕಡೇ ಅಕ್ಷರಕ್ಕೆ ಪರಶಬ್ದದ ಆದಿ ಅಕ್ಷರವನ್ನು ಉಚ್ಚಾರಣೆ ಸುಲಭವಾಗುವ ರೀತಿಯಿಂದ ಕೂಡಿಸುವದೇ "ಸಂಧಿ" ಎಂದೆನ್ನಿಸುವದು.

22. ಪ್ರ. ಸಂಧಿ ಮಾಡದೆ ಶಬ್ದಗಳನ್ನು ಬರೆಯುವದಕ್ಕೆ ಹೆಸರೇನು?

ಉ. "ಪ್ರಕೃತಿಭಾವ"ವೆಂಬ ಹೆಸರು.

23. ಪ್ರ. ಸಂಧಿಯ ಉಪಾಯಗಳೆಷ್ಟು?

ಉ. "ಲೋಪ, ಆಗಮ, ಆದೇಶ," ಈ 3 ಉಪಾಯಗಳು. ಅವುಗಳ ವಿವರ ಹ್ಯಾಗೆಂದರೆ:

"ಲೋಪ"ವೆಂದರೆ ಶಬ್ದದಲ್ಲಿ ಮುಂಚೆ ಇದ್ದ ಅಕ್ಷರಗಳೊಳಗೆ ಒಂದು ಕಾಣದೇ ಹೋಗುವದು. ಉದಾ. ಮಾತು-ಇಲ್ಲ= ಮಾತಿಲ್ಲ.

"ಆಗಮ"ವೆಂದರೆ ಪೂರ್ವಶಬ್ದದ ಕಡೇ ಅಕ್ಷರಕ್ಕೂ ಪರಶಬ್ದದ ಆದಿ ಅಕ್ಷರಕ್ಕೂ ನಡುವೆ ಮತ್ತೊಂದು ಹೊಸ ಅಕ್ಷರ ಶೇರುವದು. ಉದಾ. ಕೆಲಸ-ಇಲ್ಲ ಕೆಲಸವಿಲ್ಲ.

"ಆದೇಶ"ವೆಂದರೆ ಮುಂಚೆ ಇದ್ದ ಅಕ್ಷರಗಳಲ್ಲಿ ಒಂದು ಕಾಣದೆ ಹೋಗಿ, ಅದಕ್ಕೆ ಬದಲಾಗಿ ಮತ್ತೊಂದು ಹೊಸ ಅಕ್ಷರ ಬರುವದು. ಉದಾ. ಸೋತು-ಹೋಗಿ=ಸೋತ್ಹೋಗಿ.

**24.** ಪ್ರ. ಸಂಧಿ ಬರುವ ಪಕ್ಷಗಳು ಯಾವವು?

ಉ. "ಶಬ್ದಸಮಾಸ, ಪ್ರತ್ಯಯಾನುಬಂಧನೆ, ವಾಕ್ಯಸಂಹಿತ," ಈ 3 ಪಕ್ಷಗಳಲ್ಲಿ ಸಂಧಿ ಬರುವದು.

**25.** ಪ್ರ. ಸಂಧಿ ಎಷ್ಟು ವಿಧವು?

ಉ. "ಸಂಸ್ಕೃತ ಸಂಧಿ, ಕನ್ನಡ ಸಂಧಿ," ಈ 2 ವಿಧವು. ಸಂಸ್ಕೃತದಿಂದ ಕನ್ನಡದಲ್ಲಿ ಶೇರಿದ ತತ್ಸಮ ಶಬ್ದಗಳ ಸಮಾಸದಲ್ಲಿ ಮಾತ್ರ ಸಂಸ್ಕೃತ ಸಂಧಿ ಬರುವದು, ಕಡಿಮೆ ಎಲ್ಲಾ ಪಕ್ಷಗಳಲ್ಲಿ ಕನ್ನಡ ಸಂಧಿಯು.

**26.** ಪ್ರ. ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತ ಸ್ವರಸಂಧಿಯ ಮುಖ್ಯವಾದ ವಿಧಿಗಳು ಯಾವವು?

ಉ. "ಸವರ್ಣದೀರ್ಘ, ಯೆಣ್ಣು, ಗುಣ, ವೃದ್ಧಿ" ಈ 4 ಸಂಧಿ ವಿಧಿಗಳು.

**27.** ಪ್ರ. ಸವರ್ಣದೀರ್ಘ ಸಂಧಿ ಹ್ಯಾಗೆ?

ಉ. ಸವರ್ಣವೆಂದೆನ್ನಿಸಿ ಕೊಳ್ಳುವ ಸಮಾನ ಸ್ವರಗಳು ಒಂದಕ್ಕೊಂದು ಕಲಿತು ಹೋಗಿ ದೀರ್ಘವಾಗುವದು.

| | | | | |
|---|---|---|---|---|
| ಅ ಅ | | ಇ ಇ | | ಉ ಊ = ಊ |
| ಅ ಆ | = ಆ, | | = ಈ, | |
| ಆ ಆ | | ಇ ಈ | | ಋ ಋ = ೠ |

ಉದಾ. (ಅಕ್ಷರ-ಅಭ್ಯಾಸ=) ಅಕ್ಷರಾಭ್ಯಾಸ, (ಕವಿ-ಈಶ್ವರ=) ಕವೀಶ್ವರ, (ವಿಷ್ಣು-ಉತ್ಸವ=) ವಿಷ್ಣೂತ್ಸವ.

**28.** ಪ್ರ. ಯೆಣ್ಣು ಸಂಧಿ ಹ್ಯಾಗೆ?

ಉ. ಅವರ್ಣವೆಂದೆನ್ನಿಸಿ ಕೊಳ್ಳುವ ಅಸಮಾನ ಸ್ವರಗಳು ಪರವಾದರೆ, ಇ ಕಾರವು ಯ್ ವತ್ತೂ, ಉ ಕಾರವು ವ್ ವತ್ತೂ, ಋ ಕಾರವು ರ್ ವತ್ತೂ ಆಗುವದು. ಉದಾ. (ಪ್ರತಿ-ಅಕ್ಷ=) ಪ್ರತ್ಯ

ಕ್ಷ, (ಅತಿ-ಉತ್ತಮ=) ಅತ್ಯುತ್ತಮ, (ಪ್ರತಿ-ಏಕ=) ಪ್ರತ್ಯೇಕ, (ಮನು-ಅಂತರ=) ಮನ್ವಂತರ, (ಪಿತೃ-ಅಂಶ=) ಪಿತ್ರಂಶ.

29. ಪ್ರ. ಗುಣ ಸಂಧಿ ಹ್ಯಾಗೆ?
ಉ. ಅ ಆ ಕಾರಕ್ಕೆ ಇ ಈ ಕಾರ ಪರವಾದರೆ, ಒಂದಕ್ಕೊಂದು ಕಲಿತು ಏ ಕಾರವಾಗುವದು. ಅ ಕಾರಕ್ಕೆ ಉ ಕಾರ ಪರವಾದರೆ, ಓ ಕಾರವಾಗುವದು, ಋ ಕಾರ ಪರವಾದರೆ, ಅರ್ ಕಾರವಾಗುವದು. ಉದಾ. (ಜ್ಞಾನ-ಇಂದ್ರಿಯ=) ಜ್ಞಾನೇಂದ್ರಿಯ, (ಮಹಾ-ಈಶ್ವರ=) ಮಹೇಶ್ವರ, (ಪಾದ-ಉದಕ=) ಪಾದೋದಕ, (ಮಹಾ-ಋಷಿ=) ಮಹರ್ಷಿ.

30. ಪ್ರ. ವೃದ್ಧಿ ಯೆಂಬ ಸ್ವರಸಂಧಿಯ ವಿಧಿಯು ಹ್ಯಾಗೆ?
ಉ. ಅ, ಆ ಸ್ವರಗಳಿಗೆ ಏ, ಐ ಕಾರಗಳು ಮುಂದಾದರೆ ಐ ಸ್ವರವು ಆಗುವದು. ಅವುಗಳಿಗೆ ಓ ಸ್ವರವು ಮುಂದಾದರೆ ಔ ಸ್ವರವಾಗುವದು. ಉದಾ. [ಪ್ರಥಮ-ಏಕವಚನ=] ಪ್ರಥಮೈಕವಚನ, [ಸೇನ-ಓಘ=] ಸೇನೌಘ.

31. ಪ್ರ. ಸಂಸ್ಕೃತ ವ್ಯಂಜನಸಂಧಿ ಎಷ್ಟು ವಿಧವು?
ಉ. ಅದು ನಾನಾ ವಿಧವು. ಅದರಲ್ಲಿ ಮುಖ್ಯ ವಿಧಿ ಯಾವದಂದರೆ: ಪೂರ್ವಪದದ ಕಡೇ ವ್ಯಂಜನವು ತನಗೆ ಪರವಾಗುವ ವ್ಯಂಜನದ ಇಚ್ಛೆಗೆ ಒಳಗಾಗಿ ಅದಕ್ಕೆ ಸಮಾನವಾಗುವದು. ಉದಾ. (ಸತ್-ಪುರುಷ=) ಸತ್ಪುರುಷ, (ಸತ್-ಗುರು=) ಸದ್ಗುರು, (ಸತ್-ಚಿತ್ತ=) ಸಚ್ಚಿತ್ತ, (ಸತ್-ಜನ=) ಸಜ್ಜನ, (ಸತ್-ಮಾರ್ಗ=) ಸನ್ಮಾರ್ಗ, (ಸತ್-ವಾಕ್ಯ=) ಸದ್ವಾಕ್ಯ, (ಸತ್-ಆಚಾರ=) ಸದಾಚಾರ.

32. ಪ್ರ. ಕನ್ನಡ ಸಂಧಿ ಹ್ಯಾಗೆ?
ಉ. ಶಬ್ದಸಮಾಸದಲ್ಲಿಯೂ ಪ್ರತ್ಯಯಾನುಬಂಧನೆಯಲ್ಲಿಯೂ

ಕನ್ನಡ ಸಂಧಿಯು ನಿತ್ಯವಾದದ್ದು, ವಾಕ್ಯಸಂಹಿತದಲ್ಲಿ ವಿಕಲ್ಪವಾದದ್ದು.

33. ಪ್ರ. ಕನ್ನಡ ಸ್ವರಸಂಧಿ ಹ್ಯಾಗೆ?

ಉ. ಪದಗಳ ಅರ್ಥ ತಿಳಿಯುವದಕ್ಕೆ ಅಡ್ಡಿ ಆಗದ ಪಕ್ಷದಲ್ಲಿ ಹ್ರಸ್ವ ಸ್ವರಗಳಿಗೆಲ್ಲಾ ಲೋಪ ಬರುವದು 1), ಅಡ್ಡಿ ಆಗುವ ಪಕ್ಷದಲ್ಲಿ ಅ ಕಾರದ ಮುಂದೆ "ವ್" ಆಗಮವು, ಇ ಎ ಕಾರದ ಮುಂದೆ "ಯ್" ಆಗಮವು ಬರುವದು 2), ಶುದ್ಧ ತತ್ಸಮ ಶಬ್ದಗಳ ಅಂತ್ಯ ಸ್ವರವಾದ ಉ ಋ ಕಾರದ ಮುಂದೆ ಯಾವಾಗಲೂ "ವ್" ಆಗಮವು 3), ಎಲ್ಲಾ ದೀರ್ಘ ಸ್ವರಗಳ ಮುಂದೆ ಯಾವಾಗಲೂ "ಯ್" ಆಗಮವು ಬರುವದು 4).

1. ಉದಾ. (ಅವುಡ್ಲ-ಎಣ್ಣೆ=) ಅವುಡ್ಲೆಣ್ಣೆ, (ಕುಸ್ತಿ-ಆಟ=) ಕುಸ್ತಾಟ, (ನೀರು-ಅಡಿಕೆ=) ನೀರಡಿಕೆ, (ಗೊಂಬೆ-ಆಟ=) ಗೊಂಬಾಟ.
2. (ಗುಣ-ಆಗು=) ಗುಣವಾಗು, (ಜ್ಞಾನ-ಇಲ್ಲ=) ಜ್ಞಾನವಿಲ್ಲ, (ಗರ್ವ-ಉಳ್ಳ=) ಗರ್ವವುಳ್ಳ, (ಹುಲಿ-ಉಗುರು=) ಹುಲಿಯುಗುರು, (ಬುದ್ಧಿ-ಇಲ್ಲ=) ಬುದ್ಧಿಯಿಲ್ಲ, (ಹಾಂಗೆ-ಏ=) ಹಾಂಗೆಯೇ.
3. (ಗುರು-ಅಂನು=) ಗುರುವನ್ನು, (ಗುರು-ಇಗೆ=) ಗುರುವಿಗೆ, (ಕರ್ತೃ-ಅನ್ನು=) ಕರ್ತೃವನ್ನು—ಇತ್ಯಾದಿ.
4. (ಆ-ಆ=) ಆಯಾ, (ಕೈ-ಅಲ್ಲಿ=) ಕೈಯಲ್ಲಿ, (ನೋ-ಉತ್ತದೆ=) ನೋಯುತ್ತದೆ.

34. ಪ್ರ. ಕನ್ನಡ ವ್ಯಂಜನಸಂಧಿ ಹ್ಯಾಗೆ?

ಉ. ಅದರ ವಿಧಿಗಳು ಕನ್ನಡ ಶಬ್ದಸಮಾಸದಲ್ಲಿ ಮಾತ್ರ ಪ್ರಯೋಗವಾಗುವ ಕಾರಣ, ಅವುಗಳನ್ನು ಅದರ ವಿವರದಲ್ಲಿ ನೋಡ ತಕ್ಕದ್ದು.



## ಎರಡನೇ ಭಾಗ.

# ಶಬ್ದ ಖಂಡ

### 1. ಶಬ್ದಭೇದಪ್ರಕರಣ.

35. ಪ್ರ. ಶಬ್ದವೆಂದರೇನು?
ಉ. ಒಂದೇ ಅರ್ಥವನ್ನು ಹೇಳುವ ಅಕ್ಷರಗಳ ಗುಂಪು "ಶಬ್ದ" ವೆಂದು ವರ್ತಿಸುತ್ತದೆ. ಅದರ ಮೂಲಾಕ್ಷರಗಳು ಮಾತ್ರ ಇದ್ದರೆ "ಪ್ರಕೃತಿ" ಯೆಂದೆನ್ನಿಸಿ ಕೊಳ್ಳುವದು. ಪ್ರಕೃತಿಯ ಕೊನೆಯಲ್ಲಿ ಶೇರುವ ಬೇರೆ ಬೇರೆ ಅಕ್ಷರಗಳಿಗೆ "ಪ್ರತ್ಯಯ"ವೆಂಬ ಹೆಸರು. ಅಂಥಾ ಪ್ರತ್ಯಯವನ್ನು ಹೊಂದಿದ ಶಬ್ದವು "ಪದ"ವೆಂದು ಪ್ರಯೋಗಿಸಲ್ಪಡುವದು.

36. ಪ್ರ. ಶಬ್ದಗಳ ಭೇದಗಳು ಎಷ್ಟು ವಿಧವು?
ಉ. "ಜಾತಿಭೇದ, ರೂಪಭೇದ, ವಾಗರ್ಥಭೇದ," ಈ 3 ವಿಧವು.

37. ಪ್ರ. ಶಬ್ದಗಳ ಜಾತಿ ಎಷ್ಟು ವಿಧವು?
ಉ. "ತತ್ಸಮ, ತದ್ಭವ, ದೇಶಿ, ಅನ್ಯದೇಶಿ, ಗ್ರಾಮ್ಯ," ಈ 5 ವಿಧವು.

38. ಪ್ರ. ತತ್ಸಮ ಶಬ್ದವೆಂದರೇನು?
ಉ. ಸಂಸ್ಕೃತದಿಂದ ಕನ್ನಡದಲ್ಲಿ ಶೇರಿದ ಶಬ್ದಗಳನ್ನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಸಮವಾಗಿ ಪ್ರಯೋಗಿಸಿದರೆ, ಅವುಗಳಿಗೆ "ತತ್ಸಮ" ಎಂಬ ಹೆಸರು. ಉದಾ. ಶೂರ, ಪ್ರೀತಿ, ಗುರು.

39. ಪ್ರ. ತದ್ಭವ ಶಬ್ದವೆಂದರೇನು?
ಉ. ಸಂಸ್ಕೃತದಲ್ಲಿ ಭಾವಿಸಿದಂತೆ ಅಲ್ಲಾ, ನಾನಾ ವಿಕಾರವ ಹೊಂದಿ ಕನ್ನಡದಲ್ಲಿ ಪ್ರಯೋಗಿಸುವ ಶಬ್ದಗಳು. ಉದಾ. ತತ್ಸಮ:— ವೃಷಭ, ದೇವಾಲಯ, ಸ್ತಂಭ; ತದ್ಭವ:— ಬಸವ, ದೇಗಲ, ಕಂಭ.

40. ಪ್ರ. ದೇಶಿ ಶಬ್ದವೆಂದರೇನು?

ಉ. ಪೂರ್ವಕಾಲದ ಬುನಾದಿಯಿಂದ ಕರ್ನಾಟಕ ದೇಶದಲ್ಲಿ ಪ್ರಯೋಗಿಸಿದ ಅಚ್ಚ ಕನ್ನಡ ಶಬ್ದಗಳು "ದೇಶಿ"ವೆಂದೆನ್ನಿಸಿ ಕೊಳ್ಳುವವು. ಉದಾ. ಕೈ, ಕಾಲು, ಹುಳ, ಮಳೆ.

41. ಪ್ರ. ಅನ್ಯದೇಶಿ ಶಬ್ದವೆಂದರೇನು?

ಉ. ಕರ್ನಾಟಕದಲ್ಲಿ ಮುಂಚೆ ಧೊರೆತನ ಮಾಡಿದ ತುರುಕರು, ಈಗಿನ ಧೊರೆಗಳಾದ ಇಂಗ್ಲಿಷರು, ಇವರು ಮೊದಲಾದ ಅನ್ಯದೇಶಸ್ಥರ ಸಹವಾಸದಿಂದ ಕನ್ನಡದಲ್ಲಿ ಶೇರಿದ ಶಬ್ದಗಳು "ಅನ್ಯದೇಶಿ" ವೆಂದೆನ್ನಿಸುವವು. ಉದಾ. ಸಲಾಮು, ಹುಕ್ಕುಮು, ಕಚೇರಿ, ರಿಪೊರ್ಟು, ಅಪ್ಪೀಲು, ಕೋರ್ಟು.

42. ಪ್ರ. ಗ್ರಾಮ್ಯ ಶಬ್ದವೆಂದರೇನು?

ಉ. ಗ್ರಾಮಸ್ಥರು ವ್ಯಾಕರಣ ವಿಧಿಗಳಿಗೆ ವಿರೋಧವಾಗಿ ಪ್ರಯೋಗಿಸುವ ಅಪಶಬ್ದಗಳು "ಗ್ರಾಮ್ಯ"ವೆಂದೆನ್ನಿಸುವವು. ಉದಾ. ಯೇಸು (=ಎಷ್ಟು), ಆಸು (=ಅಷ್ಟು), ಬೊಮ್ಮ (=ಬ್ರಹ್ಮ).

43. ಪ್ರ. ಶಬ್ದಗಳ ರೂಪ ಎಷ್ಟು ವಿಧವು?

ಉ. "ಸಿದ್ಧಶಬ್ದಗಳು, ವ್ಯುತ್ಪನ್ನಶಬ್ದಗಳು, ಸಮಾಸಶಬ್ದಗಳು," ಈ 3 ವಿಧವು.

44. ಪ್ರ. ಸಿದ್ಧಶಬ್ದಗಳು ಯಾವವು?

ಉ. ಎರಡನೇ ಶಬ್ದದಿಂದ ಹುಟ್ಟದೆ, ತನ್ನಲ್ಲಿ ತಾನೇ ಸಿದ್ಧವಾದ ಶಬ್ದಗಳು. ಉದಾ. ಒಲೆ, ಮನೆ, ಮಾಡು.

45. ಪ್ರ. ವ್ಯುತ್ಪನ್ನ ಶಬ್ದಗಳು ಯಾವವು?

ಉ. ಬುನಾದಿಯಿಂದ ಇರದೆ, ತರುವಾಯ ಬೇರೆ ಶಬ್ದಗಳಿಂದ ಉತ್ಪನ್ನವಾದ ಶಬ್ದಗಳು.

46. ಪ್ರ. ಅವು ಎಷ್ಟು ವಿಧವು?

ಉ. "ಕೃದಂತಗಳು, ತದ್ಧಿತಾಂತಗಳು," ಈ 2 ವಿಧವು. ಕೃದಂತಗಳೆಂದರೆ "ಕೃತ್" ಎಂಬ ಕ್ರಿಯಾಪದಗಳ ಧಾತುವಿಗೆ ಬೇರೆ ಬೇರೆ ಕೃತ್ಪ್ರತ್ಯಯಗಳು ಕೂಡಿದ್ದರಿಂದ ಹುಟ್ಟಿದ ಶಬ್ದಗಳು. ಉದಾ. (ನಡಿ) ನಡಿಸು, ನಡತೆ, ನಡಾವಳಿ, ನಡಿಯುವಿಕೆ. ತದ್ಧಿತಾಂತಗಳೆಂದರೆ ಧಾತುವಿಗೆ ಅಲ್ಲದೆ ಬೇರೆ ಶಬ್ದಗಳಿಗೆ ನಾನಾ ತದ್ಧಿತಪ್ರತ್ಯಯಗಳು ಕೂಡಿದ್ದರಿಂದ ಹುಟ್ಟಿದ ಶಬ್ದಗಳು. ಉದಾ. (ಒಳ್ಳೆ) ಒಳ್ಳೆತನ, (ಮೋಸ) ಮೋಸಗಾರ, (ರೋಗ) ರೋಗಿಷ್ಟ, (ಬುದ್ಧಿ) ಬುದ್ಧಿವಂತ.

**47.** ಪ್ರ. ಸಮಾಸಶಬ್ದಗಳು ಯಾವವು?

ಉ. ಎರಡು ಭಿನ್ನ ಪದಗಳು ಒಂದಕ್ಕೊಂದು ಶೇರಿ ಒಂದೇ ಅರ್ಥವನ್ನು ಹೇಳುವ ಏಕಪದವಾದರೆ, ಅದು "ಸಮಾಸಪದ"ವೆಂದೆನ್ನಿಸಿಕೊಂಬುವದು. ಅಂಥಾ ಸಮಾಸಶಬ್ದದಲ್ಲಿ ಹಿಂದಳ ಪದಕ್ಕೆ "ಪೂರ್ವಪದ"ವೆಂದು, ಮುಂದಲ ಪದಕ್ಕೆ "ಪರಪದ"ವೆಂದು ಹೆಸರು. ಉದಾ. ಗುರುವಾಕ್ಯ, ಕೈಕೆಲಸ.

**48.** ಪ್ರ. ಸಮಾಸಪದಗಳು ಎಷ್ಟು ವಿಧವು?

ಉ. ಆ ಆ ಸಮಾಸಗಳ ರೂಪದ ಪ್ರಕಾರ ಕನ್ನಡ ವ್ಯಾಕರಣಕಾರರು ಕನ್ನಡ ಸಮಾಸಗಳಲ್ಲಿ "ಲುಕ್ಸಮಾಸ, ಅಲುಕ್ಸಮಾಸ, ಗಮಕಸಮಾಸ, ಕ್ರಿಯಾಸಮಾಸ" ವೆಂಬ 4 ವಿಧಗಳನ್ನು ವಿಶೇಷಿಸುತ್ತಾರೆ, ಹ್ಯಾಗಂದರೆ:

1. "ಲುಕ್ಸಮಾಸದಲ್ಲಿಯೂ" 2. "ಅಲುಕ್ಸಮಾಸದಲ್ಲಿಯೂ" ಪರಪದವಾದ ವೊಂದು ನಾಮಪದಕ್ಕಾಗಲಿ ಸರ್ವನಾಮಕ್ಕಾಗಲಿ ಪೂರ್ವಪದವಾದ ವೊಂದು ನಾಮಪದವು ಷಷ್ಠಿ ವಿಭಕ್ತ್ಯರ್ಥಕ ವಿಶೇಷಣವಾಗಿ ಸಮಾಸವಾಗುವದು. ಆದರೆ ಲುಕ್ಸಮಾಸದಲ್ಲಿ ಆ ನಾಮಪದದ ಷಷ್ಠಿ ವಿಭಕ್ತಿ ಪ್ರತ್ಯಯವು ಲುಪ್ತ

ವಾಗಿದೆ, ಅಲುಕ್ಸಮಾಸದಲ್ಲಿ ಅದು ಲೋಪವಾಗದು. ಉದಾ.
ಲುಕ್ಸಮಾಸಕ್ಕೆ—ಜಾಲಿಮರ, ನಿಂಬೆಹಣ್ಣು, ಊರುಗುಬ್ಬಿ.
ಅಲುಕ್ಸಮಾಸಕ್ಕೆ—ಬೇವಿನ ಮರ, ಮಾವಿನ ಹಣ್ಣು, ಊರಿನವರು.

3. "ಗಮಕಸಮಾಸ"ದಲ್ಲಿ ಪೂರ್ವಪದವು ಸರ್ವನಾಮಕ, ಸಂಖ್ಯಾವಾಚಕ, ಗುಣವಾಚಕ, ದಿಗ್ವಾಚಕ, ಕೃದ್ವಾಚಕ, 4 ವಿಶೇಷಣವೇ, ಮತ್ತು ಪರಪದವು ನಾಮಪದವಾದ ಅಥವಾ ಪ್ರಥಮ ಪುರುಷಾರ್ಥಕ ಸರ್ವನಾಮವಾದ ವಿಶೇಷ್ಯವೇ. ಉದಾ.

ಸರ್ವನಾಮಕಕ್ಕೆ—ಯಾವ ಮನುಷ್ಯ, ಈ ಮರ, ಅಂಥವ.
ಸಂಖ್ಯಾವಾಚಕಕ್ಕೆ—ಎರಡು ಕೈಗಳು, ನಾಲ್ಕನೆ ದಿವಸ, ಆರನೆಯವ.
ಗುಣವಾಚಕಕ್ಕೆ—ಶುದ್ಧ ಮನಸ್ಸು, ಹಿರಿ ಮಗ, ಚಿಕ್ಕವ.
ದಿಗ್ವಾಚಕಕ್ಕೆ—ತೆಂಕಣ ದಿಕ್ಕು, ಮೇಗಣ ಪೇಟೆ, ಮೂಡಣವ.
ಕೃದ್ವಾಚಕಕ್ಕೆ— { ಅಳುವ ಕೂಸು, ಹೋದ ವರುಷ, ಕಾಣದ ಆತ್ಮ, ಮಾಡುವವ, ಮಾಡಿದವ, ಮಾಡದವ. }

4. "ಕ್ರಿಯಾಸಮಾಸ"ದಲ್ಲಿ ಪೂರ್ವಪದವಾದ ನಾಮವಾಗಲಿ ಗುಣವಾಚಕವಾಗಲಿ ಪರಪದವು ಹೇಳುವ ಕ್ರಿಯೆಗೆ ಅರ್ಥವ್ಯಕ್ತಿ ಕೊಡುವದು.

ಉದಾ. ಲಕ್ಷ್ಯ ಮಾಡು, ಭಯ ಪಡು, ಧೈರ್ಯಗೊಳ್ಳು, ಈಡಾಗು, ಅಡ್ಡ ಬೀಳು, ಸರಿ ಬೀಳು, ಝುಗಳಾಡು, ಅಗಲಾಡು.

49. ಪ್ರ. ಶಬ್ದಗಳ ವಾಗರ್ಥವನ್ನು ನೋಡಿದರೆ, ಅವುಗಳಲ್ಲಿ ಎಷ್ಟು ವಿಧವು?
ಉ. "ನಾಮಪದ, ಕ್ರಿಯಾಪದ, ಅವ್ಯಯಶಬ್ದ"ವೆಂಬ 3 ವಿಶೇಷಗಳನ್ನು ಮಾಡಿ, ಕಡಿಮೆ ಶಬ್ದವಿಧಗಳೆಲ್ಲಾ ಇವುಗಳ ಉಪವಿಶೇಷಗಳೆಂದೆಣಿಸಿದ್ದಾರೆ. ಹ್ಯಾಗಂದರೆ ಕ್ರಮದಿಂದ ವಿಭಕ್ತಿ ಪ್ರತ್ಯಯಗಳನ್ನು ಪಡಕೊಳ್ಳುವ ಪದಗಳೆಲ್ಲಾ ನಾಮಪದಗಳೆಂದು, ಕ್ರಿಯೆಗಳನ್ನು ಹೇಳುವ ಪದಗಳೆಲ್ಲ ಕ್ರಿಯಾಪದಗಳೆಂದು, ಇವೆರಡು ಲಕ್ಷ

ಣಗಳಿಲ್ಲದ ಕಡಿಮೆ ಶಬ್ದಗಳೆಲ್ಲ ಅವ್ಯಯಶಬ್ದಗಳೆಂದು ತಿಳುಕೊಳ್ಳ ತಕ್ಕದ್ದು.

---

## 2. ನಾಮಪದಪ್ರಕರಣ.

50. ಪ್ರ. ನಾಮಪದವೆಂದರೇನು?
ಉ. ಯಾವದೊಂದರ ಹೆಸರನ್ನು ಹೇಳುವ ಪದಕ್ಕೆ "ನಾಮಪದ" ವೆಂಬ ಹೆಸರು. ಉದಾ. ದೇವದಾಸ, ತಂದೆ, ಮುದುಕ, ಮರಣ, ಸ್ವರ್ಗ, ಸುಖ, ಸ್ವಪ್ನ.

51. ಪ್ರ. ನಾಮಪದಗಳಿಗೆ ಬರುವ ವಿಶೇಷಗಳು ಯಾವವು?
ಉ. "ಲಿಂಗ, ಸಂಖ್ಯೆ, ವಿಭಕ್ತಿ," ಈ 3 ವಿಶೇಷಗಳು.

52. ಪ್ರ. ಲಿಂಗ ಎಷ್ಟು ವಿಧವಾದದ್ದು?
ಉ. "ಪುಲ್ಲಿಂಗ"ಅಂದರೆ ಗಂಡು,"ಸ್ತ್ರೀಲಿಂಗ"ಅಂದರೆ ಹೆಣ್ಣು, "ನಪುಂಸಕಲಿಂಗ"ಅಂದರೆ ಗಂಡಲ್ಲಾ ಹೆಣ್ಣಲ್ಲಾ, ಈ ಮೂರು ವಿಧವು.

53. ಪ್ರ. ಕನ್ನಡದಲ್ಲಿ ನಾಮಪದಗಳಿಗೆ ಲಿಂಗಭೇದಗಳು ಹ್ಯಾಗೆ?
ಉ. ಜ್ಞಾನವುಳ್ಳ ವಸ್ತುಗಳಲ್ಲಿ ಪುರುಷರ ನಾಮಗಳಿಗೆ ಪುಲ್ಲಿಂಗ, ಸ್ತ್ರೀಯರ ನಾಮಗಳಿಗೆ ಸ್ತ್ರೀಲಿಂಗ, ಜ್ಞಾನವಿಲ್ಲದ ಕಡಿಮೆ ವಸ್ತುಗಳ ನಾಮಗಳಿಗೆಲ್ಲಾ ನಪುಂಸಕಲಿಂಗವು ಬರುವದು.

54. ಪ್ರ. ಇದಕ್ಕೆ ಅಪವಾದಗಳು ಯಾವವು?
ಉ. 1ನೇದು. ಸೂರ್ಯ, ಚಂದ್ರ, ಗ್ರಹಗಳು ಜ್ಞಾನವಿಲ್ಲದ ನಕ್ಷತ್ರಲೋಕಗಳು ಇದ್ದಾಗ್ಯೂ, ಅವುಗಳಿಗೆ ವಿಕಲ್ಪವಾಗಿ ಪುಲ್ಲಿಂಗ ಬರುವದು. ಯಾಕಂದರೆ ಅವು ಜ್ಞಾನವುಳ್ಳ ದೇವರುಗಳೆಂದು ಹಿರಿಯರು ನೆನಸಿದರು.

2ನೇದು. "ಶಿಶು, ಕೂಸು, ಮಗು"—ಈ ನಾಮಗಳನ್ನು ಧರಿಸುವ ಮನುಷ್ಯರಿಗೆ ಜ್ಞಾನವು ಇನ್ನೂ ಬಾರದ ಕಾರಣ, ಆ ನಾ

ಮಗಳಿಗೆ ನಪುಂಸಕಲಿಂಗ ಬರುವದು. ಅದೇ ಕಾರಣದಿಂದ "ಆಳು, ಹೆಂಡತಿ, ತೊತ್ತು" ಮೊದಲಾದ ಕೆಲವು ನಾಮಪದಗಳಿಗೆ ವಿಕಲ್ಪವಾಗಿ ನಪುಂಸಕಲಿಂಗವು ಬರುವದು.

55. ಪ್ರ. ನಾಮಪದಗಳ ಸಂಖ್ಯೆ ಎಷ್ಟು ವಿಧವು?

ಉ. "ಏಕವಚನ, ಬಹುವಚನ," ಈ 2 ವಿಧವು: ಏಕವಚನವು ಏಕ ವಸ್ತುವನ್ನು ಹೇಳುವದು; ಬಹುವಚನವು ಬಹು ವಸ್ತುಗಳನ್ನು ಹೇಳುವದು. ಉದಾ. ಹುಡುಗ—ಹುಡುಗರು, ಮನೆ—ಮನೆಗಳು, ಕೂಸು—ಕೂಸುಗಳು.

56. ಪ್ರ. ವಿಭಕ್ತಿ ಎಂದರೇನು?

ಉ. ವಾಕ್ಯದಲ್ಲಿ ನಾಮಪದಗಳಿಗೆ ಬರುವ ನಾನಾ ಸಂಬಂಧಗಳನ್ನು ತೋರಿಸುವದಕ್ಕೆ ಅವುಗಳ ಸ್ವರೂಪಗಳಲ್ಲಿ ಆಗುವ ವಿಕಾರಗಳು "ವಿಭಕ್ತಿ"ಗಳೆಂದೆನ್ನಿಸುವವು.

57. ಪ್ರ. ಅಂಥಾ ವಿಭಕ್ತಿಗಳು ಎಷ್ಟು?

ಉ. ಸಂಸ್ಕೃತದಲ್ಲಿ 8 ವಿಭಕ್ತಿಗಳು. ಅವುಗಳಿಗೆ ಅಂಕಾಸಂಜ್ಞೆಯೂ ಕಾರಕಾರ್ಥಸಂಜ್ಞೆಯೂ ಉದಾಹರಣೆಗಳೂ ಯಾವವೆಂದರೆ:

| ಅಂಕಾಸಂಜ್ಞೆ. | ಕಾರಕಾರ್ಥಸಂಜ್ಞೆ. | ಉದಾಹರಣೆ. |
|---|---|---|
| ಪ್ರಥಮೆ | ಕರ್ತೃ ವಿಭಕ್ತಿ | ಶೂರನು |
| . . . . | ಸಂಬೋಧನ | ಶೂರನೇ |
| ದ್ವಿತೀಯೆ | ಕರ್ಮ ವಿಭಕ್ತಿ | ಶೂರನನ್ನು |
| ತೃತೀಯೆ | ಕರಣ ವಿಭಕ್ತಿ | ಶೂರನಿಂದ |
| ಚತುರ್ಥಿ | ಸಂಪ್ರದಾನ ವಿಭಕ್ತಿ | ಶೂರನಿಗೆ |
| ಪಂಚಮಿ | ಅಪಾದಾನ ವಿಭಕ್ತಿ | ಶೂರನ ದೆಶೆಯಿಂದ |
| ಷಷ್ಠಿ | ಸಂಬಂಧ ವಿಭಕ್ತಿ | ಶೂರನ |
| ಸಪ್ತಮಿ | ಅಧಿಕರಣ ವಿಭಕ್ತಿ | ಶೂರನಲ್ಲಿ |

ಮೊದಲು ಕನ್ನಡ ವ್ಯಾಕರಣ ಬರದವರು ಕನ್ನಡ ವಿಭಕ್ತಿಗಳನ್ನು ಸಂಸ್ಕೃತ ವ್ಯಾಕರಣಾನುಸಾರವಾಗಿ ಬರೆದರು. ಆದರೆ ನೆಟ್ಟಗೆ ವಿಚಾರಿಸಿ ನೋಡಿದರೆ, ಅಪಾದಾನ ವಿಭಕ್ತಿಯು ಕನ್ನಡದಲ್ಲಿ ಇಲ್ಲ. ಅದರ ಅರ್ಥವನ್ನು ಕನ್ನಡದಲ್ಲಿ ತೃತೀಯೆ ವಿಭಕ್ತಿರೂಪವು ಹೇಳುವದು.

58. ಪ್ರ. ವಿಭಕ್ತಿಪ್ರತ್ಯಯಗಳು ಯಾವವು?

ಉ. ವಿಭಕ್ತಿರೂಪಗಳನ್ನು ಹುಟ್ಟಿಸುವದಕ್ಕೆ ನಾಮಪದಗಳ ಕೊನೆಯಲ್ಲಿ ಬೇರೆ ಬೇರೆ ಪ್ರತ್ಯಯಗಳು ಬರುತ್ತವೆ. ಅವು ಯಾವವೆಂದರೆ:

| | | |
|---|---|---|
| ಪ್ರಥಮೆ | ಕರ್ತೃ ವಿಭಕ್ತಿ | ಉ |
| . . . . | ಸಂಬೋಧನ | ಎ (ಏ) |
| ದ್ವಿತೀಯೆ | ಕರ್ಮ ವಿಭಕ್ತಿ | ಅನ್ನು |
| ತೃತೀಯೆ | ಕರಣ ವಿಭಕ್ತಿ | ಇಂದ |
| ಚತುರ್ಥಿ | ಸಂಪ್ರದಾನ ವಿಭಕ್ತಿ | ಇಗೆ (ಗೆ), ಕ್ಕೆ |
| ಷಷ್ಠಿ | ಸಂಬಂಧ ವಿಭಕ್ತಿ | ಅ |
| ಸಪ್ತಮಿ | ಅಧಿಕರಣ ವಿಭಕ್ತಿ | ಅಲ್ಲಿ |

59. ಪ್ರ. ಈ ವಿಭಕ್ತಿಪ್ರತ್ಯಯಗಳು ನಾಮಪದಗಳ ಕೊನೆಯಲ್ಲಿ ಸೇರುವದು ಹ್ಯಾಗೆ?

ಉ. ಏಕವಚನದಲ್ಲಿ ಅ ಕಾರಾಂತ ಪುಲ್ಲಿಂಗ ಸ್ತ್ರೀಲಿಂಗಗಳ ಲಿಂಗ ಸೂಚಕದ ಮೇಲೆ ವಿಭಕ್ತಿಪ್ರತ್ಯಯಗಳು ಬರುತ್ತವೆ. ಉಳಿದ ನಾಮಪದಗಳಿಗೆ ಬೇರೆ ಬೇರೆ ಆಗಮಗಳು ಬರುತ್ತವೆ. ಬಹುವಚನದಲ್ಲಿ ವಿಭಕ್ತಿಪ್ರತ್ಯಯಗಳು ಎಲ್ಲಾ ನಾಮಪದಗಳ ಬಹುವಚನ ಸೂಚಕಗಳ ಮೇಲೆ ಬರುತ್ತವೆ. ಇವನ್ನೆಲ್ಲಾ ಮುಂದಿನ ಉದಾಹರಣೆಗಳಲ್ಲಿ ನೋಡಿ ಕೊಳ್ಳುವದು.

---

## ನಾಮಪದಗಳ

| | ವಿಭಕ್ತಿಗಳ ಸಂಜ್ಞೆಗಳು. | ವಿಭಕ್ತಿ ಪ್ರತ್ಯಯಗಳು. | ಅ ಕಾರಾಂ | |
|---|---|---|---|---|
| | | | ಪುಲ್ಲಿಂಗ. | ಸ್ತ್ರೀಲಿಂಗ. |
| | | | ಸೇವಕ. | |
| ಏಕವಚನ. | ಪ್ರ. ಕರ್ತೃ ವಿಭಕ್ತಿ | ಉ | ಸೇವಕನು | ಸೇವಕಳು |
| | ಸಂಬೋಧನ | ಎ (ಏ) | ಸೇವಕನೇ | ಸೇವಕಳೇ |
| | ದ್ವಿ. ಕರ್ಮ ವಿಭಕ್ತಿ | ಅನ್ನು | ಸೇವಕನನ್ನು | ಸೇವಕಳನ್ನು |
| | ತೃ. ಕರಣ ವಿಭಕ್ತಿ | ಇಂದ | ಸೇವಕನಿಂದ | ಸೇವಕಳಿಂದ |
| | ಚ. ಸಂಪ್ರದಾನವಿಭಕ್ತಿ | ಇಗೆ (ಗೆ), ಕ್ಕೆ | ಸೇವಕನಿಗೆ | ಸೇವಕಳಿಗೆ |
| | ಷ. ಸಂಬಂಧ ವಿಭಕ್ತಿ | ಅ | ಸೇವಕನ | ಸೇವಕಳ |
| | ಸ. ಅಧಿಕರಣ ವಿಭಕ್ತಿ | ಅಲ್ಲಿ | ಸೇವಕನಲ್ಲಿ | ಸೇವಕಳಲ್ಲಿ |
| ಬಹುವಚನ. | ಪ್ರ. ಕರ್ತೃ ವಿಭಕ್ತಿ | ಉ | ಸೇವಕರು | |
| | ಸಂಬೋಧನ | ಎ (ಏ) | ಸೇವಕರೇ | |
| | ದ್ವಿ. ಕರ್ಮ ವಿಭಕ್ತಿ | ಅನ್ನು | ಸೇವಕರನ್ನು | |
| | ತೃ. ಕರಣ ವಿಭಕ್ತಿ | ಇಂದ | ಸೇವಕರಿಂದ | |
| | ಚ. ಸಂಪ್ರದಾನವಿಭಕ್ತಿ | ಇಗೆ | ಸೇವಕರಿಗೆ | |
| | ಷ. ಸಂಬಂಧ ವಿಭಕ್ತಿ | ಅ | ಸೇವಕರ | |
| | ಸ. ಅಧಿಕರಣ ವಿಭಕ್ತಿ | ಅಲ್ಲಿ | ಸೇವಕರಲ್ಲಿ | |

## ವಿಭಕ್ತಿರೂಪಮಾಲೆ.

| ತಗಳು. | ಇ, ಎ, ಐ ಕಾರಾಂತಗಳು. | ಉ ಕಾರಾಂತಗಳು. | |
|---|---|---|---|
| ನಪುಂಸಕಲಿಂಗ. | ಪು. ಸ್ತ್ರೀ. ನಪು. ಲಿಂಗ. | ನಿತ್ಯ ಉ ಕಾರಾಂತ. | ಅನಿತ್ಯ ಉ ಕಾರಾಂತ. |
| ಮರ. | ಕುರಿ. | ಗುರು. | ಊರು. |
| ಮರವು | ಕುರಿಯು | ಗುರುವು | ಊರು |
| ಮರವೇ | ಕುರಿಯೇ | ಗುರುವೇ | ಊರೇ |
| ಮರವನ್ನು | ಕುರಿಯನ್ನು | ಗುರುವನ್ನು | ಊರನ್ನು |
| ಮರದಿಂದ | ಕುರಿಯಿಂದ | ಗುರುವಿನಿಂದ | ಊರಿನಿಂದ, ಊ [ರಿಂದ |
| ಮರಕ್ಕೆ | ಕುರಿಗೆ | ಗುರುವಿಗೆ | ಊರಿಗೆ |
| ಮರದ | ಕುರಿಯ | ಗುರುವಿನ | ಊರಿನ, ಊರ |
| ಮರದಲ್ಲಿ | ಕುರಿಯಲ್ಲಿ | ಗುರುವಿನಲ್ಲಿ | ಊರಿನಲ್ಲಿ, ಊ [ರಲ್ಲಿ |
| ಮರಗಳು | ಕುರಿಗಳು | ಗುರುಗಳು | ಊರುಗಳು |
| ಮರಗಳೇ | ಕುರಿಗಳೇ | ಗುರುಗಳೇ | ಊರುಗಳೇ |
| ಮರಗಳನ್ನು | ಕುರಿಗಳನ್ನು | ಗುರುಗಳನ್ನು | ಊರುಗಳನ್ನು |
| ಮರಗಳಿಂದ | ಕುರಿಗಳಿಂದ | ಗುರುಗಳಿಂದ | ಊರುಗಳಿಂದ |
| ಮರಗಳಿಗೆ | ಕುರಿಗಳಿಗೆ | ಗುರುಗಳಿಗೆ | ಊರುಗಳಿಗೆ |
| ಮರಗಳ | ಕುರಿಗಳ | ಗುರುಗಳ | ಊರುಗಳ |
| ಮರಗಳಲ್ಲಿ | ಕುರಿಗಳಲ್ಲಿ | ಗುರುಗಳಲ್ಲಿ | ಊರುಗಳಲ್ಲಿ |

## 3. ಸರ್ವನಾಮಪ್ರಕರಣ.

60. ಪ್ರ. ಸರ್ವನಾಮವೆಂದರೇನು?
ಉ. ವಾಕ್ಯದಲ್ಲಿ ನಾಮಪದಗಳಿಗೆ ಪ್ರತಿಯಾಗಿ ಪ್ರಯೋಗಿಸುವ ಶಬ್ದಗಳು "ಸರ್ವನಾಮ"ವೆಂದೆನ್ನಿಸಿ ಕೊಂಬವು.

61. ಪ್ರ. ಅವು ಎಷ್ಟು ವಿಧವು?
ಉ. "ಪುರುಷಾರ್ಥಕ, ಆತ್ಮಾರ್ಥಕ, ಪ್ರಶ್ನಾರ್ಥಕ, ನಿದರ್ಶಕ", ಈ 4 ವಿಧವು. ಇವುಗಳಿಗೆ "ಸಂಖ್ಯಾವಾಚಕ, ಪರಿಮಾಣವಾಚಕ, ಸಾಮಾನ್ಯಾರ್ಥಕ, ಸಮಾಸ ಸರ್ವನಾಮಗಳು"ಸಂಬಂಧವಾಗಿವೆ.

62. ಪ್ರ. ಪುರುಷಾರ್ಥಕ ಸರ್ವನಾಮಗಳು ಯಾವವು?
ಉ. ಉತ್ತಮಪುರುಷ ಏಕವಚನ "ನಾನು", ಬಹುವಚನ "ನಾವು"; ಮಧ್ಯಮಪುರುಷ ಏಕವಚನ "ನೀನು", ಬಹುವಚನ "ನೀವು"; ಪ್ರಥಮಪುರುಷ ಏಕವಚನ:

| ಏಕವಚನ | ಬಹುವಚನ |
|---|---|
| ಪುಲ್ಲಿಂಗ—"ಅವನು"<br>ಸ್ತ್ರೀಲಿಂಗ—"ಅವಳು" | ಪುಂಸ್ತ್ರೀಲಿಂಗ—"ಅವರು" |
| ನಪುಂಸಕ—"ಅದು" | ನಪುಂಸಕ—"ಅವು(ಗಳು)" |

63. ಪ್ರ. ಆತ್ಮಾರ್ಥಕ ಸರ್ವನಾಮ ಯಾವದು?
ಉ. ಏಕವಚನ "ತಾನು", ಬಹುವಚನ "ತಾವು".

64. ಪ್ರ. ಪ್ರಶ್ನಾರ್ಥಕ ಸರ್ವನಾಮಗಳು ಯಾವವು?
ಉ. ವಸ್ತುಗಳನ್ನು ಕೇಳುವ ಸರ್ವನಾಮಗಳು ಯಾವವಂದರೆ:— ಏಕವ. ಪು. "ಯಾವನು", ಸ್ತ್ರೀ. "ಯಾವಳು", ನಪು. "ಯಾವದು"; ಬಹುವ. "ಯಾವರು", ನಪು. "ಯಾವವು". ಒಟ್ಟಿಗೆ ಕೇಳುವಂಥಾವು ಯಾವವಂದರೆ— ಪುಂಸ್ತ್ರೀ. "ಯಾರು". ನಪು. "ಏನು". ವಸ್ತುಗಳ ಗುಣ ಕೇಳುವ ಸರ್ವನಾಮಗಳು ಯಾವವಂದರೆ— "ಎಂಥವನು, ಎಂಥವಳು, ಎಂಥಾದು; ಎಂಥವರು, ಎಂಥಾವು".

65. ಪ್ರ. ನಿದರ್ಶಕ ಸರ್ವನಾಮಗಳು ಯಾವವು?
ಉ. ವಸ್ತುಗಳನ್ನು ಸಮಿಾಪದಲ್ಲಿ ತೋರಿಸುವದಕ್ಕೆ— "ಇವನು

(ಈತನು), ಇವಳು (ಈಕೆ), ಇದು; ಇವರು, ಇವು(ಗಳು)". ದೂರದಲ್ಲಿ ಸೂಚಿಸುವದಕ್ಕೆ—"ಅವನು (ಆತನು), ಅವಳು (ಆಕೆ), ಅದು; ಅವರು, ಅವು(ಗಳು)". ವಸ್ತುಗಳ ಗುಣ ಸೂಚಿಸುವದಕ್ಕೆ, ಸಮೀಪದಲ್ಲಿ—"ಇಂಥವನು" ಇತ್ಯಾದಿ ದೂರದಲ್ಲಿ—"ಅಂಥವನು" ಇತ್ಯಾದಿ.

66. ಪ್ರ. ಸರ್ವನಾಮುಗಳ ವಿಭಕ್ತಿರೂಪಗಳು ಹ್ಯಾಗೆ?

ಉ. ಅವುಗಳ ವಿಭಕ್ತಿರೂಪಗಳನ್ನು ಮುಂದಿನ ಪಟ್ಟಿಯಲ್ಲಿ ನೋಡಿಕೊಳ್ಳುವದು.

ಸರ್ವನಾಮುಗಳ ವಿಭಕ್ತಿರೂಪಮಾಲೆ.

| | | | | | |
|---|---|---|---|---|---|
| ಪ್ರ. | ನಾನು | ನಾವು | ಅವನು | ಅವಳು | ಅವರು |
| ದ್ವಿ. | ನನ್ನನ್ನು | ನಮ್ಮನ್ನು | ಅವನನ್ನು | ಅವಳನ್ನು | ಅವರನ್ನು |
| ತೃ. | ನನ್ನಿಂದ | ನಮ್ಮಿಂದ | ಅವನಿಂದ | ಅವಳಿಂದ | ಅವರಿಂದ |
| ಚ. | ನನಗೆ | ನಮಗೆ | ಅವನಿಗೆ | ಅವಳಿಗೆ | ಅವರಿಗೆ |
| ಷ. | ನನ್ನ | ನಮ್ಮ | ಅವನ | ಅವಳ | ಅವರ |
| ಸ. | ನನ್ನಲ್ಲಿ | ನಮ್ಮಲ್ಲಿ | ಅವನಲ್ಲಿ | ಅವಳಲ್ಲಿ | ಅವರಲ್ಲಿ |
| | ನೀನು | ನೀವು | ಇವನು | ಇವಳು | ಇವರು |
| | ತಾನು | ತಾವು | ಯಾವನು | ಯಾವಳು | ಯಾವರು |
| ಪ್ರ. | ಅದು | ಅವು(ಗಳು) | ಯಾರು | ಯೇನು | |
| ದ್ವಿ. | ಅದನ್ನು | ಅವುಗಳನ್ನು | ಯಾರನ್ನು | ಯೇನು, ಯೇನ | |
| ತೃ. | ಅದರಿಂದ | ಅವುಗಳಿಂದ | ಯಾರಿಂದ | ಯಾತರಿಂದ | |
| ಚ. | ಅದಕ್ಕೆ | ಅವುಗಳಿಗೆ | ಯಾರಿಗೆ | ಯಾತಕ್ಕೆ, ಯಾಕೆ | |
| ಷ. | ಅದರ | ಅವುಗಳ | ಯಾರ | ಯಾತರ | |
| ಸ. | ಅದರಲ್ಲಿ | ಅವುಗಳಲ್ಲಿ | ಯಾರಲ್ಲಿ | ಯಾತರಲ್ಲಿ | |
| | ಇದು | ಇವು(ಗಳು) | | | |
| | ಯಾವದು | ಯಾವವು(ಗಳು) | | | |

67. ಪ್ರ. ಸಂಖ್ಯಾಪರಿಮಾಣವಾಚಕಗಳು ಯಾವವು?

ಉ. "ಒಂದು (ಒಬ್ಬ), ಎರಡು, ಮೂರು" ಮುಂತಾದ ಅಂಕೆಗಳ ಹೆಸರುಗಳು "ಸಂಖ್ಯಾವಾಚಕಗಳು"; ಅವುಗಳಿಗೆ ಪೂರಣಾರ್ಥದಲ್ಲಿ 'ನೆ' ಎಂಬ ಪ್ರತ್ಯಯ ಹತ್ತಿಸುವದರಿಂದ "ಒಂದನೆ, ಎರಡನೆ, ಮೂರನೆ" ಮೊದಲಾದ "ಸಂಖ್ಯಾಪೂರಣಗಳು" ಆಗುವವು. ಆದರೆ "ಎಷ್ಟು, ಇಷ್ಟು, ಅಷ್ಟು, ಬಹಳ, ಸ್ವಲ್ಪ, ಕೆಲವು, ಹಲವು, ಎಲ್ಲ, ಅನೇಕ, ಸಕಲ, ಸಮಸ್ತ, ಯಾವತ್ತು" ಇತ್ಯಾದಿ ಪದಗಳು ವಸ್ತುಗಳ ಸಂಖ್ಯೆ ವಿಶೇಷಿಸದೆ, ಅವುಗಳ ಪರಿಮಾಣ ಮಾತ್ರ ಒಟ್ಟಿಗೆ ಹೇಳುವ ಕಾರಣ "ಪರಿಮಾಣವಾಚಕಗಳು" ಎಂದೆನಿಸಿ ಕೊಂಬವು. ಅವುಗಳಲ್ಲಿ "ಎಷ್ಟು" ಎಂಬದಕ್ಕೆ ಪ್ರಶ್ನಾರ್ಥವೂ, "ಇಷ್ಟು, ಅಷ್ಟು" ಎಂಬವುಗಳಿಗೆ ನಿದರ್ಶಕಾರ್ಥವೂ ಬರುವದು.

68. ಪ್ರ. ಇವುಗಳಿಂದ ಸರ್ವನಾಮಗಳಿಗೆ ಸಮಾನ ಪದಗಳು ಹುಟ್ಟುವದು ಹ್ಯಾಗೆ?

ಉ. ಮೇಲೆ ಹೇಳಿದ ಸಂಖ್ಯಾವಾಚಕ, ಸಂಖ್ಯಾಪೂರಣ, ಪರಿಮಾಣವಾಚಕಗಳೆಲ್ಲಾ ಗಮಕಸಮಾಸದಲ್ಲಿ ಪೂರ್ವಪದಗಳಾಗಿ ಪ್ರಯೋಗಿಸುವವು. ಉದಾ.

ಸಂಖ್ಯಾವಾಚಕ: ಹತ್ತು ಕುದುರೆಗಳು.

ಸಂಖ್ಯಾಪೂರಣ: ಮೂರನೆ ಮಗನು.

ಪರಿಮಾಣವಾಚಕ: ಕೆಲವು ವರುಷಗಳು.

ಆದರೆ ಉತ್ತರ ವಿಶೇಷಣಗಳ ಪ್ರಯೋಗದಲ್ಲಿ ಅವುಗಳೊಳಗೆ ಕೆಲವುಗಳು ಪುಂಸ್ತ್ರೀಲಿಂಗ ಬಹುವಚನಾರ್ಥಕ ಅಚ್ಪ್ರತ್ಯಯಗಳನ್ನು ಹೊಂದುವದರಿಂದ ಸರ್ವನಾಮಗಳಿಗೆ ಸಮಾನ ಪದಗಳಾಗುವವು. ಉದಾ. ಒಬ್ಬನು, ಒಬ್ಬಳು, ಒಬ್ಬರು, ಇಬ್ಬರು, ಮೂವರು (=ಮುವ್ವರು), ನಾಲ್ವರು, ಐವರು, ಆರ್ವರು, ಏಳ್ವರು; ಎಷ್ಟರು, ಇಷ್ಟರು,

ಅಷ್ಟರು, ಕೆಲವರು, ಹಲವರು, ಎಲ್ಲರು, ಅನೇಕರು, ಸಕಲರು, ಸಮಸ್ತರು" ಇತ್ಯಾದಿ.

ಇವುಗಳಲ್ಲಿ "ಒಬ್ಬನು, ಒಬ್ಬಳು, ಒಬ್ಬರು" ಎಂಬವುಗಳಿಗೆ ತಮ್ಮ ಸಂಖ್ಯಾರ್ಥವೇ ಹೊರ್ತು ಸಾಮಾನ್ಯಾರ್ಥಕ ಸರ್ವನಾಮಗಳ ಪ್ರಯೋಗವು ಬರುವದು. "ಒಂದು, ಎರಡು" ಮುಂತಾದ ನಪುಂಸಕಲಿಂಗಗಳಿಗೆ "ಅದು" ಎಂಬ ನಪುಂಸಕ ಸರ್ವನಾಮದ ಪ್ರಕಾರ, ಮತ್ತು "ಒಬ್ಬನು, ಒಬ್ಬಳು, ಒಬ್ಬರು, ಇಬ್ಬರು" ಮೊದಲಾದ ಪುಂಸ್ತ್ರೀಲಿಂಗಗಳಿಗೆ "ಇವನು, ಇವಳು, ಇವರು" ಎಂಬ ಪುಂಸ್ತ್ರೀಲಿಂಗದ ಸರ್ವನಾಮಗಳ ಪ್ರಕಾರ ವಿಭಕ್ತಿಗಳಾಗುವವು.

---

## ಸರ್ವನಾಮಗಳಿಗೂ ನಾಮಪದಗಳಿಗೂ ಸಮಾನವಾದ ಕ್ರಿಯಾವಿಶೇಷಣಗಳು.

69. ಪ್ರ. ನಾಮಪದಗಳಿಗೂ ಸರ್ವನಾಮಗಳಿಗೂ ಅಲ್ಲದೆ, ಇನ್ನು ಬೇರೆ ಶಬ್ದಗಳಿಗೆ ವಿಭಕ್ತಿಗಳು ಬರುವದುಂಟೋ?

ಉ. ಸ್ಥಾನವಾಚಕ, ಕಾಲವಾಚಕ ಕ್ರಿಯಾವಿಶೇಷಣ ಶಬ್ದಗಳೊಳಗೆ ಕೆಲವುಗಳಿಗೆ ಸಪ್ತಮಿ ವಿಭಕ್ತ್ಯರ್ಥಕವಾದ ಅವುಗಳ ನಿಜ ರೂಪವೇ ಹೊರ್ತು ಇನ್ನು ತೃತೀಯೆ, ಚತುರ್ಥಿ, ಷಷ್ಠಿ ವಿಭಕ್ತಿರೂಪಗಳು ಉಂಟು. ಇವುಗಳ ಪ್ರಯೋಗವು ಹಳಗನ್ನಡದಿಂದ ಹೊಸಗನ್ನಡದಲ್ಲಿ ಬಂದದೆ. ಅವು ಯಾವವಂದರೆ—

"ಎತ್ತ"—ತ್ರಿ. ಎತ್ತಣಿಂದ, ಚ. ಎತ್ತಗೆ, ಷ. ಎತ್ತಣ; "ಎತ್ತಲು"—ಎತ್ತಲಿಂದ, ಎತ್ತಲಿಗೆ, ಎತ್ತಲಿನ. ಇದರಂತೆ "ಇತ್ತ, ಅತ್ತ, ಸುತ್ತ, ಇತ್ತಲು, ಅತ್ತಲು, ಸುತ್ತಲು" ಎಂಬಿವುಗಳ ವಿಭಕ್ತಿರೂಪಗಳು. "ಹೊರಗೆ (=ಹೊರಗು)"—ತ್ರಿ. ಹೊರಗಿನಿಂದ, ಚ. ಹೊ

ರಕ್ಕೆ=ಹೊರೆಯಕ್ಕೆ=ಹೊರಗೆ, ಷ. ಹೊರಗಣ=ಹೆರಗಿನ. ಇದರಂತೆ "ಒಳಗೆ (=ಒಳಗು), ಕೆಳಗೆ (=ಕೆಳಗು)" ಎಂಬಿವುಗಳ ರೂಪಗಳು.

"ಮೇಲೆ (=ಮೇಲು)"—ಮೇಲಿನಿಂದ, ಮೇಲಕ್ಕೆ, ಮೇಲಿನ. "ಮೇಗೆ (=ಮೇಗು)"—ಮೇಗಿನಿಂದ, ಮೇಗೆ=ಮೇಕ್ಕೆ, ಮೇಗಣ=ಮೇಗಳ. ಇದರಂತೆ "ಮುಂದೆ (ಮುಂದು), ಹಿಂದೆ (ಹಿಂದು)". "ಎಲ್ಲಿ"—ತ್ರಿ. ಎಲ್ಲಿಂದ, ಚ. ಎಲ್ಲಿಗೆ, ಷ. ಎಲ್ಲಿಯ. ಇದರಂತೆ "ಇಲ್ಲಿ, ಅಲ್ಲಿ". "ಈಚೆ (=ಈಚು)"—ತ್ರಿ. ಈಚಿನಿಂದ, ಚ. ಈಚಿಗೆ, ಷ. ಈಚೆಯ. ಇದರಂತೆ "ಆಚೆ (=ಆಚು)". "ಎಂದು"—ತ್ರಿ. ಎಂದಿನಿಂದ, ಚ. ಎಂದಿಗೆ, ಷ. ಎಂದಿನ. ಇದರಂತೆ "ಇಂದು, ಅಂದು". "ನಾಳೆ (=ನಾಳು)"—ತ್ರಿ. ನಾಳಿಂದ=ನಾಳಿನಿಂದ, ಚ. ನಾಳಿಗೆ, ಷ. ನಾಳಿನ. ಇದರಂತೆ "ನಿನ್ನೆ (=ನಿನ್ನು), ಮೊನ್ನೆ (=ಮೊನ್ನು), ಮುಂಚೆ (=ಮುಂಚು)". "ಈಗ, ಈಗ್ಯೆ (=ಈಗು)"—ತ್ರಿ. ಈಗಿನಿಂದ, ಷ. ಈಗಿನ. ಇದರಂತೆ "ಆಗ=ಆಗ್ಯೆ".

"ಯೆತ್ತಣ, ಅತ್ತಣ, ಇತ್ತಣ, ಹೊರಗಣ, ವೊಳಗಣ, ಕೆಳಗಣ, ಮೇಗಣ=ಮೇಗಳ, ಮುಂದಣ=ಮುಂದಲ, ಹಿಂದಣ=ಹಿಂದಳ, ಯೆಲ್ಲಿಯಣ, ಇಲ್ಲಿಯಣ, ಅಲ್ಲಿಯಣ" ಯೆಂಬ ಹಳಗನ್ನಡ ಷಷ್ಠಿ ವಿಭಕ್ತಿರೂಪಗಳು ಹೊಸ ಕನ್ನಡದಲ್ಲಿ ಗುಣವಾಚಿಗಳಿಗೆ ಸಮವಾದ ದಿಗ್ವಾಚಿಗಳಾಗಿ ಪ್ರಯೋಗಿಸುವವು. ಅವುಗಳಿಗೆ "ಮೂಡಣ, ತೆಂಕಣ, ಪಡುವಣ, ಬಡಗಣ, ನಡುವಣ, ಕಡೆಯಣ" ಎಂಬಿವು ಸಮವಾಗಿವೆ.

---

## 4. ಕ್ರಿಯಾಪದಪ್ರಕರಣ.

70. ಪ್ರ. ಕ್ರಿಯಾಪದವೆಂದರೇನು?

ಉ. ಮಾಡೋಣ, ಪಡೋಣ, ಇರೋಣ ಮೊದಲಾದ ಕ್ರಿಯೆಗಳನ್ನು ಹೇಳುವ ಪದಗಳಿಗೆ "ಕ್ರಿಯಾಪದ"ವೆಂಬ ಹೆಸರು. ಅಂಥಾ ಕ್ರಿಯಾಪದಗಳ ಮೂಲಕ್ಕೆ "ಧಾತು"ವೆಂಬ ಹೆಸರು.

71. ಪ್ರ. ಧಾತುಗಳು ಎಷ್ಟು ವಿಧವು?

ಉ. "ಸಕರ್ಮಕ, ಅಕರ್ಮಕ, ಪ್ರೇರಣಾರ್ಥಕ", ಈ ಮೂರು ವಿಧವು. ಇವುಗಳ ವಿವರ ಹ್ಯಾಗಂದರೆ:

1ನೆ. "ಸಕರ್ಮಕ ಧಾತು"ಗಳಿಗೆ ಕರ್ತೃ, ಕರ್ಮ, ಈ ಎರಡು ಬರುತ್ತವೆ. ಉದಾ. ಹುಡುಗನು ಪುಸ್ತಕವನ್ನು ಓದುತ್ತಾನೆ. ಈ ವಾಕ್ಯದಲ್ಲಿ 'ಹುಡುಗನು' ಎಂಬದು ಕರ್ತೃವು, 'ಪುಸ್ತಕವನ್ನು' ಎಂಬದು ಕರ್ಮವು. ಇದರಂತೆ—"ಮಾಡು, ಕೇಳು, ಹೇಳು, ಬರೆ" ಮುಂತಾದ ಸಕರ್ಮಕ ಧಾತುಗಳಿಗೆ ಕರ್ಮ ಬರುವದು.

2ನೆ. "ಅಕರ್ಮಕ ಧಾತು"ಗಳಿಗೆ ಕರ್ತೃ ಮಾತ್ರ ಬರುವದು, ಕರ್ಮವು ಬರುವದಿಲ್ಲ. ಉದಾ. ಹುಡುಗನು ಹೋಗುತ್ತಾನೆ. ಈ ವಾಕ್ಯದಲ್ಲಿ ಕರ್ಮವನ್ನು ಕೇಳುವ, ಯಾರನ್ನು? ಏನನ್ನು? ಎಂಬ ಪ್ರಶ್ನೆಗಳಿಗೆ ಉತ್ತರವಿಲ್ಲ.

3ನೆ. "ಪ್ರೇರಣಾರ್ಥಕ ಧಾತು"ಗಳಿಗೆ ಕ್ರಿಯೆಯನ್ನು ಮಾಡುವ ಕರ್ತೃ, ಅವನನ್ನು ಪ್ರೇರೇಪಿಸುವ ಮತ್ತೊಬ್ಬ ಕರ್ತೃ—ಈ ಪ್ರಕಾರ ಇಬ್ಬರು ಕರ್ತರು ಇದ್ದಾರೆ. ಉದಾ. ಉಪಾಧ್ಯಾಯನು ಹುಡುಗನಿಂದ ಪುಸ್ತಕವನ್ನು ಓದಿಸಿದನು. ಸಕರ್ಮಕ ಧಾತುಗಳಿಗೆ "ಇಸು" ಪ್ರತ್ಯಯ ಹಚ್ಚುವದರಿಂದ ಪ್ರೇರಣಾರ್ಥಕ ಧಾತುಗಳು ಆಗುತ್ತವೆ. ಉದಾ. ಮಾಡು—ಮಾಡಿಸು, ಬರೆ—ಬರೆಸು, ಹೇಳು—ಹೇಳಿಸು.

72. ಪ್ರ. ಧಾತುಗಳಿಂದ ಹುಟ್ಟುವ ಕ್ರಿಯಾಪದರೂಪಗಳು ಎಷ್ಟು ವಿಧವು?
ಉ. "ಅವ್ಯಯರೂಪಗಳು, ಆಖ್ಯಾತರೂಪಗಳು", ಈ 2 ವಿಧವು. ಅವ್ಯಯರೂಪಗಳಿಗೆ ಕಾಲಭೇದ ಅರ್ಥಭೇದಗಳು ಮಾತ್ರ ಉಂಟು. ಆಖ್ಯಾತರೂಪಗಳಿಗೆ ಕಾಲಭೇದ ಅರ್ಥಭೇದಗಳಲ್ಲದೆ, ಪುರುಷ ಲಿಂಗ ವಚನಭೇದಗಳು ಸಹಾ ಉಂಟು.

73. ಪ್ರ. ಅವ್ಯಯರೂಪಗಳು ಯಾವವು?
ಉ. "ಭಾವಾರ್ಥಕರೂಪ, ನ್ಯೂನ, ಕೃದ್ವಾಚಿ, ಕ್ರಿಯಾನಾಮವಾಚಕ", ಈ 4 ವಿಧವಾದ ರೂಪಗಳು.

"ಭಾವಾರ್ಥಕರೂಪ"ಗಳು ಕ್ರಿಯೆಯನ್ನು ಭಾವಾರ್ಥವಾಗಿ ಹೇಳುತ್ತವೆ. "ನ್ಯೂನ"ರೂಪಗಳು ಹೇಳುವ ಕ್ರಿಯೆಯು ಸಂಪೂರ್ಣವಲ್ಲ, ನ್ಯೂನವಾಗಿದೆ; ಅದು ಸಂಪೂರ್ಣವಾಗುವದಕ್ಕೆ ವಾಕ್ಯದಲ್ಲಿ ಇನ್ನೊಂದು ಆಖ್ಯಾತಕ್ರಿಯಾಪದವು ಅಗತ್ಯ. "ಕೃದ್ವಾಚಿ"ಗಳು ವಿಶೇಷಣಪದಗಳಾಗಿ ಪ್ರಯೋಗಿಸುತ್ತವೆ. "ಕ್ರಿಯಾನಾಮವಾಚಕ"ಗಳು ಕ್ರಿಯೆಗಳನ್ನು ಭಾವಾರ್ಥವಾಗಿ ಹೇಳುವ ನಾಮಪದಗಳಾಗಿವೆ.

74. ಪ್ರ. ಅವ್ಯಯರೂಪಗಳಿಗೆ ಬರುವ ಕಾಲಭೇದ ಅರ್ಥಭೇದಗಳು ಯಾವವು?
ಉ. "ವರ್ತಮಾನ, ಭೂತ, ಭವಿಷ್ಯತ್ತು, ನಿಷೇಧ", ಈ 4 ಭೇದಗಳು. "ವರ್ತಮಾನಕಾಲ"ವೆಂದರೆ ನಡೆಯುವ ಕಾಲವು, "ಭೂತಕಾಲ"ವೆಂದರೆ ಹೋದ ಕಾಲವು, "ಭವಿಷ್ಯತ್ಕಾಲ"ವೆಂದರೆ ಬರುವ ಕಾಲವು, "ನಿಷೇಧ"ವೆಂದರೆ ಕ್ರಿಯೆ ನಡೆಯುವದಿಲ್ಲವೆಂಬ ಅರ್ಥವನ್ನು ಹೇಳುವ ರೂಪವು.

75. ಪ್ರ. ಅವ್ಯಯರೂಪಗಳು ಧಾತುಗಳಿಂದ ಹುಟ್ಟುವದು ಹ್ಯಾಗೆ?
ಉ. ಧಾತುಗಳ ಮೇಲೆ ಬೇರೆ ಬೇರೆ "ವಿಕರಣ" ಪ್ರತ್ಯಯಗಳು

ಬರುವದರಿಂದ, ಅವ್ಯಯಕ್ರಿಯಾಪದರೂಪಗಳು ಹುಟ್ಟುತ್ತವೆ. ಈ ವಿಕರಣಗಳು ಧಾತುಗಳ ಮೇಲೆ ಬರುವದರಲ್ಲಿ ಉ ಕಾರಾಂತ ಧಾತುಗಳ ಅನಿತ್ಯ ಉ ಕಾರಕ್ಕೆ ಲೋಪ ಬರುವದು, ಇ ಕಾರಾಂತ ಧಾತುಗಳ ಅಂತ್ಯ ಸ್ವರದ ತರುವಾಯ "ಯ್" ಆಗಮ ಬರುವದು.

76. ಪ್ರ. ಅವ್ಯಯರೂಪಗಳ ವಿಕರಣಗಳು ಯಾವವು?

ಉ. ಅವು ಈ ಕೆಳಗಿನ ಪಟ್ಟಿಯಲ್ಲಿ ನೋಡ ತಕ್ಕದ್ದು.

| | | ವಿಕರಣ | ಉ ಕಾರಾಂತ ಧಾತು | ಇ ಕಾರಾಂತ ಧಾತು |
|---|---|---|---|---|
| 1. ಭಾವಾರ್ಥಕ ರೂಪಗಳು. | 1ನೆ. | ಅ | ಮಾಡ | ನುಡಿಯ |
| | 2ನೆ. | ಅಲು | ಮಾಡಲು | ನುಡಿಯಲು |
| | 3ನೆ. | ಅಲಿಕ್ಕೆ | ಮಾಡಲಿಕ್ಕೆ | ನುಡಿಯಲಿಕ್ಕೆ |
| 2. ನ್ಯೂನಗಳು. | ವರ್ತಮಾನ | ಉತ್ತಾ | ಮಾಡುತ್ತಾ | ನುಡಿಯುತ್ತಾ |
| | ಭೂತ | ಇ, (ದು) ದು | ಮಾಡಿ | ನುಡಿದು |
| | ನಿಷೇಧ | ಅದೆ | ಮಾಡದೆ | ನುಡಿಯದೆ |
| 3. ಕೃದ್ವಾಚಿಗಳು. | ವರ್ತಮಾನ, ಭವಿಷ್ಯ. | ಉವ | ಮಾಡುವ | ನುಡಿಯುವ |
| | ಭೂತ | ಇದ, ದ | ಮಾಡಿದ | ನುಡಿದ |
| | ನಿಷೇಧ | ಅದ | ಮಾಡದ | ನುಡಿಯದ |
| 4. ಕ್ರಿಯಾನಾಮ ವಾಚಕಗಳು. | ವರ್ತಮಾನ ಭವಿಷ್ಯ | ಕೃದ್ವಾಚಿಗಳ | ಮಾಡುವದು | ನುಡಿಯುವದು |
| | ಭೂತಕಾಲ | ಮೇಲೆ "ದು" | ಮಾಡಿದ್ದು | ನುಡಿದದ್ದು |
| | ನಿಷೇಧ | ಪ್ರತ್ಯಯ | ಮಾಡದ್ದು | ನುಡಿಯದ್ದು |

77. ಪ್ರ. ಆಖ್ಯಾತರೂಪಗಳ ಭೇದಗಳು ಯಾವವು?

ಉ. "ನಿಶ್ಚಯ, ನಿಷೇಧ, ವಿಧಿ", ಇವು 3 ಅರ್ಥಭೇದಗಳು. ಅವುಗಳಲ್ಲಿ ನಿಶ್ಚಯಾರ್ಥಕರೂಪಗಳಿಗೆ "ವರ್ತಮಾನ, ಭೂತ, ಭವಿಷ್ಯತ್ಕಾಲ"ವೆಂಬ 3 ಕಾಲಭೇದಗಳುಂಟು. ಭವಿಷ್ಯತ್ಕಾಲಕ್ಕೆ "ಭವಿಷ್ಯತ್ತು, ಭಾವಿ" ಎಂಬ 2 ವಿಧದ ರೂಪಗಳು; ನಿಷೇಧ, ವಿಧಿ, ಇ

ವುಗಳಿಗೆ ಕಾಲಭೇದಗಳಿಲ್ಲ. "ವಿಧಿ" ಎಂದರೆ ಅಪ್ಪಣೆ, ವಿಜ್ಞಾಪನೆ, ಆಶೆ ಇವುಗಳ ಅರ್ಥವನ್ನು ಹೇಳುವ ರೂಪವು.

78. ಪ್ರ. ಆಖ್ಯಾತರೂಪಗಳಿಗೆ ಇರುವ ಪುರುಷಭೇದಗಳು ಯಾವವು? ಉ. ಪುರುಷಾರ್ಥಕ ಸರ್ವನಾಮಗಳಿಗೆ ಬರುವ "ಉತ್ತಮ, ಮಮಧ್ಯಮ, ಪ್ರಥಮ"ವೆಂಬ 3 ಪುರುಷಭೇದಗಳೂ, ಅವುಗಳಲ್ಲಿ ಪ್ರಥಮ ಪುರುಷಕ್ಕೆ ಪುಂ ಸ್ತ್ರೀ ನಪುಂಸಕವೆಂಬ 3 ಲಿಂಗ ಭೇದಗಳೂ, ಮೂರು ಪುರುಷಗಳಿಗೆ ಏಕವಚನ, ಬಹುವಚನವೆಂಬ 2 ಸಂಖ್ಯಾಭೇದಗಳೂ, ಇಷ್ಟು ಭೇದಗಳೆಲ್ಲಾ ಆಖ್ಯಾತರೂಪಗಳಿಗೆ ಬರುತ್ತವೆ. ಅವುಗಳನ್ನು ಕ್ರಿಯಾಪದಗಳಲ್ಲಿ ಕಾಣಿಸುವದಕ್ಕೆ ಧಾತುಗಳ ಮೇಲೆಯೂ ಅವ್ಯಯರೂಪಗಳ ಮೇಲೆಯೂ ಬೇರೆ ಬೇರೆ "ಪುರುಷಪ್ರತ್ಯಯ"ಗಳು ಬರುವವು.

79. ಪ್ರ. ಆಖ್ಯಾತರೂಪಗಳಿಗೆ ಬರುವ ಪುರುಷಪ್ರತ್ಯಯಗಳು ಯಾವವು?

| | ಪುರುಷಾರ್ಥಕ ಸರ್ವನಾಮಗಳು | ವರ್ತಮಾನ | ಭೂತ | ಭವಿಷ್ಯತ್ತು | ಭಾವಿ | ನಿಷೇಧ | ವಿಧಿ |
|---|---|---|---|---|---|---|---|
| ಉತ್ತಮ | ನಾನು | ಏನೆ | ಎನು | ಏನು | ಎನು | ಎನು | ಅಲಿ |
| ಮಧ್ಯಮ | ನೀನು | ಈ | ಇ | ಈ | ಇ | ಎ | ಧಾತುಸ್ವರೂಪ |
| ಪ್ರಥಮ ಪು. | ಅವನು | ಆನೆ | ಅನು | ಆನು | ಅನು | ಅನು | ಅಲಿ |
| ಸ್ತ್ರೀ. | ಅವಳು | ಆಳೆ | ಅಳು | ಆಳು | ಅಳು | ಅಳು | |
| ನಪು. | ಅದು | ಅದೆ | ಇತು | ಈತು | ಅದು | ಅದು | |
| ಉತ್ತಮ | ನಾವು | ಏವೆ | ಎವು | ಏವು | ಎವು | ಎವು | ಉವ, ಓಣ |
| ಮಧ್ಯಮ | ನೀವು | ಈರಿ | ಇರಿ | ಈರಿ | ಇರಿ | ಅರಿ | ಇರಿ |
| ಪ್ರ. ಪು. ಸ್ತ್ರೀ. | ಅವರು | ಆರೆ | ಅರು | ಆರು | ಅರು | ಅರು | ಅಲಿ |
| ನಪು. | ಅವು | ಅವೆ | ಅವು | ಆವು | ಅವು | ಅವು | |

80. ಪ್ರ. ಈ ಪುರುಷಪ್ರತ್ಯಯಗಳು ಯಾತರ ಮೇಲೆ ಬರುತ್ತವೆ?
ಉ. ವರ್ತಮಾನಪ್ರತ್ಯಯಗಳು ವರ್ತಮಾನನ್ಯೂನದ ಮೇಲೆ, ಭವಿಷ್ಯತ್ಪ್ರತ್ಯಯಗಳು ಭೂತನ್ಯೂನದ ಮೇಲೆ, ಭೂತಪ್ರತ್ಯಯಗಳು ಭೂತಕೃದ್ವಾಚಿಯ ಮೇಲೆ, ಭಾವಿಪ್ರತ್ಯಯಗಳು ಭವಿಷ್ಯತ್ ಕೃದ್ವಾಚಿಯ ಮೇಲೆ, ನಿಷೇಧ ವಿಧಿ ಪ್ರತ್ಯಯಗಳು ಧಾತುವಿನ ಮೇಲೆ ಬರುತ್ತವೆ. ಭೂತಕಾಲದ ಪ್ರಥಮ ಪುರುಷ ನಪುಂಸಕ ಏಕವಚನದ ಪ್ರತ್ಯಯವು ಅಪವಾದವಾಗಿ ಧಾತುವಿನ ಮೇಲೆ ಬರುವದು.

81. ಪ್ರ. ಮೇಲಿನ ವಿವರಕ್ಕೆ ಉದಾಹರಣೆಗಳು ಯಾವವು?
ಉ. ಅವುಗಳನ್ನು ಕೆಳಗೆ ಬರದ "ಕ್ರಿಯಾಮಾಲೆ"ಯಲ್ಲಿ ನೋಡಿ ತಿಳಿಯ ತಕ್ಕದ್ದು.

---

# ಕ್ರಿಯಾಮಾಲೆ.

## ಉ ಕಾರಾಂತ ಧಾತುಗಳ ಉದಾಹರಣೆ.— "ಮಾಡು".

### 1. ಅವ್ಯಯರೂಪಗಳು.

| | | | | |
|---|---|---|---|---|
| ಭಾವಾರ್ಥಕ | ಮಾಡ | ಮಾಡಲು | ಮಾಡಲಿಕ್ಕೆ | |
| | ವರ್ತಮಾನಕಾಲ | ಭೂತಕಾಲ | ಭವಿಷ್ಯತ್ತು | ನಿಷೇಧ |
| ನ್ಯೂನ | ಮಾಡುತ್ತಾ | ಮಾಡಿ | ........ | ಮಾಡದೆ |
| ಕೃದ್ವಾಚಿ | ........ | ಮಾಡಿದ | ಮಾಡುವ | ಮಾಡದ |
| ಕ್ರಿಯಾನಾಮ | ........ | ಮಾಡಿದ್ದು | ಮಾಡುವದು | ಮಾಡದ್ದು |

### 2. ಆಖ್ಯಾತರೂಪಗಳು.

| | ಸರ್ವನಾಮ | | | ವರ್ತಮಾನ | ಭೂತ | ಭವಿಷ್ಯತ್ತು | ಭಾವಿ | ನಿಷೇಧ | ವಿಧಿ |
|---|---|---|---|---|---|---|---|---|---|
| ಏಕವಚನ. | ಉ. | | ನಾನು | ಮಾಡುತ್ತೇನೆ | ಮಾಡಿದೆನು | ಮಾಡೇನು | ಮಾಡುವೆನು | ಮಾಡೆನು | ಮಾಡಲಿ |
| | ಮ. | | ನೀನು | ಮಾಡುತ್ತೀ | ಮಾಡಿದಿ | ಮಾಡೀ | ಮಾಡುವಿ | ಮಾಡೆ | ಮಾಡು |
| | ಪ್ರ. | ಪು. | ಅವನು | ಮಾಡುತ್ತಾನೆ | ಮಾಡಿದನು | ಮಾಡ್ಯಾನು | ಮಾಡುವನು | ಮಾಡನು | ಮಾಡಲಿ |
| | | ಸ್ತ್ರೀ. | ಅವಳು | ಮಾಡುತ್ತಾಳೆ | ಮಾಡಿದಳು | ಮಾಡ್ಯಾಳು | ಮಾಡುವಳು | ಮಾಡಳು | |
| | | ನಪು. | ಅದು | ಮಾಡುತ್ತದೆ | ಮಾಡಿತು | ಮಾಡೀತು | ಮಾಡುವದು | ಮಾಡದು | |
| ಬಹುವಚನ. | ಉ. | | ನಾವು | ಮಾಡುತ್ತೇವೆ | ಮಾಡಿದೆವು | ಮಾಡೇವು | ಮಾಡುವೆವು | ಮಾಡೆವು | ಮಾಡುವ, ಮಾಡೋಣ |
| | ಮ. | | ನೀವು | ಮಾಡುತ್ತೀರಿ | ಮಾಡಿದಿರಿ | ಮಾಡೀರಿ | ಮಾಡುವಿರಿ | ಮಾಡರಿ | ಮಾಡಿರಿ (ಮಾಡಿ) |
| | ಪ್ರ. | ಪು. ಸ್ತ್ರೀ | ಅವರು | ಮಾಡುತ್ತಾರೆ | ಮಾಡಿದರು | ಮಾಡ್ಯಾರು | ಮಾಡುವರು | ಮಾಡರು | ಮಾಡಲಿ |
| | | ನಪು. | ಅವು | ಮಾಡುತ್ತವೆ | ಮಾಡಿದವು | ಮಾಡ್ಯಾವು | ಮಾಡುವವು | ಮಾಡವು | |

ಇ ಕಾರಾಂತ ಧಾತುಗಳ ಉದಾಹರಣೆ.— "ನುಡಿ".

| | | | | | | |
|---|---|---|---|---|---|---|
| ಬಹುವಚನ. ಪ್ರ. ಪು. ಸ್ತ್ರೀ ಅವರು<br>ನಪು. ಅವು | ಮಾಡುತ್ತಾರೆ<br>ಮಾಡುತ್ತವೆ | ಮಾಡಿದರು<br>ಮಾಡಿದವು | ಮಾಡ್ಯಾರು<br>ಮಾಡ್ಯಾವು | ಮಾಡುವರು<br>ಮಾಡುವವು | ಮಾಡರು<br>ಮಾಡವು | ಮಾಡಲಿ |

ಇ ಕಾರಾಂತ ಧಾತುಗಳ ಉದಾಹರಣೆ.—"ನುಡಿ".

## 1. ಅವ್ಯಯರೂಪಗಳು.

| | | | | |
|---|---|---|---|---|
| ಭಾವಾರ್ಥಕ | ನುಡಿಯ | ನುಡಿಯಲು | ನುಡಿಯಲಿಕ್ಕೆ | |
| | ವರ್ತಮಾನ | ಭೂತ | ಭವಿಷ್ಯತ್ತು | ನಿಷೇಧ |
| ನ್ಯೂನ | ನುಡಿಯುತ್ತಾ | ನುಡಿದು | . . . . . . | ನುಡಿಯದೆ |
| ಕೃದ್ವಾಚಿ | . . . . . . . | ನುಡಿದ | ನುಡಿಯುವ | ನುಡಿಯದ |
| ಕ್ರಿಯಾನಾಮ | . . . . . . . | ನುಡಿದದ್ದು | ನುಡಿಯುವದು | ನುಡಿಯದ್ದು |

## 2. ಆಖ್ಯಾತರೂಪಗಳು.

| ಸರ್ವನಾಮ | | ವರ್ತಮಾನ | ಭೂತ | ಭವಿಷ್ಯತ್ತು | ಭಾವಿ | ನಿಷೇಧ | ವಿಧಿ |
|---|---|---|---|---|---|---|---|
| ಏಕವಚನ. | ಉ. ನಾನು | ನುಡಿಯುತ್ತೇನೆ | ನುಡಿದೆನು | ನುಡಿದೇನು | ನುಡಿಯುವೆನು | ನುಡಿಯೆನು | ನುಡಿಯಲಿ |
| | ಮ. ನೀನು | ನುಡಿಯುತ್ತೀ | ನುಡಿದಿ | ನುಡಿದೀ | ನುಡಿಯುವಿ | ನುಡಿಯೆ | ನುಡಿ |
| | ಪ್ರ. ಪು. ಅವನು | ನುಡಿಯುತ್ತಾನೆ | ನುಡಿದನು | ನುಡಿದಾನು | ನುಡಿಯುವನು | ನುಡಿಯನು | ನುಡಿಯಲಿ |
| | ಸ್ತ್ರೀ. ಅವಳು | ನುಡಿಯುತ್ತಾಳೆ | ನುಡಿದಳು | ನುಡಿದಾಳು | ನುಡಿಯುವಳು | ನುಡಿಯಳು | |
| | ನಪು. ಅದು | ನುಡಿಯುತ್ತದೆ | ನುಡಿಯಿತು | ನುಡಿದೀತು | ನುಡಿಯುವದು | ನುಡಿಯದು | |
| ಬಹುವಚನ. | ಉ. ನಾವು | ನುಡಿಯುತ್ತೇವೆ | ನುಡಿದೆವು | ನುಡಿದೇವು | ನುಡಿಯುವೆವು | ನುಡಿಯೆವು | ನುಡಿಯುವ, ನುಡಿ [ಯೋಣ |
| | ಮ. ನೀವು | ನುಡಿಯುತ್ತೀರಿ | ನುಡಿದಿರಿ | ನುಡಿದೀರಿ | ನುಡಿಯುವಿರಿ | ನುಡಿಯರಿ | ನುಡಿಯಿರಿ |
| | ಪ್ರ. ಪು. ಸ್ತ್ರೀ. ಅವರು | ನುಡಿಯುತ್ತಾರೆ | ನುಡಿದರು | ನುಡಿದಾರು | ನುಡಿಯುವರು | ನುಡಿಯರು | ನುಡಿಯಲಿ |
| | ನಪು. ಅವು | ನುಡಿಯುತ್ತವೆ | ನುಡಿದವು | ನುಡಿದಾವು | ನುಡಿಯುವವು | ನುಡಿಯವು | |

82. ಪ್ರ. ಎಲ್ಲಾ ಕ್ರಿಯಾಪದಗಳು ಮೇಲಿನ ಉದಾಹರಣೆಗಳಿಗೆ ಅನುಸಾರವಾಗಿವೆಯೋ?

ಉ. ಇಲ್ಲಾ, ಬಹಳ ಧಾತುಗಳಿಂದ ಹುಟ್ಟಿದ ರೂಪಗಳು ಬೇರೆ ಬೇರೆ ವಿಕಾರಗಳನ್ನು ಹೊಂದಿ ಅವೆ. ಅನೇಕ ಧಾತುಗಳ ಭೂತರೂಪಗಳು ವಿಕಾರವಾಗಿವೆ. ಕೆಲವು ಧಾತುಗಳ ಭವಿಷ್ಯತ್‌ಕೃದ್ವಾಚಿಯೂ ಅದರಿಂದ ಹುಟ್ಟಿದ ಆಖ್ಯಾತರೂಪಗಳೂ ವಿಕಾರವಾಗಿವೆ. ಇನ್ನು ಕೆಲವು ಧಾತುಗಳ ನಿಷೇಧರೂಪಗಳೂ ವಿಕಾರವಾಗಿವೆ. ಮತ್ತು ಕೆಲವು ಧಾತುಗಳ ವಿಧಿರೂಪಗಳೂ ವಿಕಾರವಾಗಿವೆ.

83. ಪ್ರ. ಭೂತರೂಪಗಳಲ್ಲಿ ಬಂದ ವಿಕಾರಗಳು ಯಾವವು?

ಉ. ಅವುಗಳನ್ನು ಕೆಳಗೆ ಬರೆದ ಉದಾಹರಣೆಗಳಲ್ಲಿ ನೋಡಿ ತಿಳಿಯ ತಕ್ಕದ್ದು.

| ಧಾತು | ಭೂತನ್ಯೂನ | ಭೂತಕೃದ್ವಾಚಿ | ಭೂತ ನಪುಂಸಕ ಏಕವಚನ |
|---|---|---|---|
| 1. ಅರಿ | ಅರಿತು | ಅರಿತ | ಅರಿಯಿತು |
| 2. ಬೆವರು | ಬೆವರ್ತು | ಬೆವರ್ತ | ಬೆವರ್ತಿತು |
| 3. ಒದೆ | ಒದ್ದು | ಒದ್ದ | ಒದ್ದಿತು |
| 4. ಮಿದಿ | ಮಿತ್ತು | ಮಿತ್ತ | ಮಿತ್ತಿತು |
| 5. ಅನ್ನು | ಅಂದು | ಅಂದ | ಅಂದಿತು |
| ಉಣ್ಣು | ಉಂಡು | ಉಂಡ | ಉಂಡಿತು |
| 6. ಕಾಣು | ಕಂಡು | ಕಂಡ | ಕಂಡಿತು |
| 7. ಗೆಲ್ಲು | ಗೆದ್ದು | ಗೆದ್ದ | ಗೆದ್ದಿತು |
| 8. ಹೊರು | ಹೊತ್ತು | ಹೊತ್ತ | ಹೊತ್ತಿತು |
| 9. ಬೀಳು | ಬಿದ್ದು | ಬಿದ್ದ | (ಬಿದ್ದಿತು) ಬಿತ್ತು |
| 10. ಕೀಳು | ಕಿತ್ತು | ಕಿತ್ತ | ಕಿತ್ತಿತು |
| 11. ತರು | ತಂದು | ತಂದ | (ತಂದಿತು) ತಂತು |

| ಧಾತು | ಭೂತನ್ಯೂನ | ಭೂತಕೃದ್ವಾಚಿ | ಭೂತ ನಪುಂಸಕ ಏಕವಚನ |
|---|---|---|---|
| 12. ನಿಲ್ಲು | ನಿಂತು | ನಿಂತ | ನಿಂತಿತು |
| 13. ಇಡು | ಇಟ್ಟು | ಇಟ್ಟ | ಇಟ್ಟಿತು |
| 14. ನಗು | ನಕ್ಕು | ನಕ್ಕ | ನಕ್ಕಿತು |
| 15. ಬಾ | ಬಾತು | ಬಾತ | ಬಾತಿತು |
| 16. ನೋ | ನೊಂದು | ನೊಂದ | ನೊಂದಿತು |
| 17. ಈ | ಇತ್ತು | ಇತ್ತ | ಇತ್ತಿತು |
| 18. ಈನು | ಈದು | ಈದ | ಈಯಿತು |
| 19. ನೂಲು | ನೂತು | ನೂತ | ನೂತಿತು |
| 20. ಹೊರಡು | ಹೊರಟು | ಹೊರಟ | ಹೊರಟಿತು |
| 21. ಆಗು | ಆಗಿ | ಆದ | ಆಯಿತು |

84. ಪ್ರ. ಯಾವ ಧಾತುಗಳ ವಿಕಾರವಾದ ಭೂತರೂಪಗಳು ಮೇಲಿನ ಉದಾಹರಣೆಗಳಿಗೆ ಅನುಸಾರವಾಗಿವೆ?

ಉ. 1. ಅರಿ, ಕುರಿ, ಮರೆ, ಅವಿ, ಕಲಿ, ಬಲಿ, ಮಲೆ, ಕಳೆ, ಕೊಳೆ, ಚಳಿ, ಮೊಳೆ, ಬಿರಿ, ಅತಿ, ಮನಿ, ಅಸೆ, ಎಸೆ, ಕಿಸಿ, ನುಸಿ, ಬಸಿ, ಬೆಸೆ, ಮಸೆ, ಹಸಿ, ಹಿಸಿ, ಹುಸಿ, ಹೊಸೆ.

2. ಬೆವರು, ಕೊನರು, ಚಿಗುರು, ತಳಿರು, ಮಿಳಿರು, ಕವಲು, ಮಡಲು.

3. ಒದೆ, ಕದಿ, ಹದಿ, ಹೊದಿ.

4. ಮಿದಿ.

5. ಅನ್ನು, ಎನ್ನು, ತಿನ್ನು; ಉಣ್ಣು, ಕೊಳ್ಳು.

6. ಕಾಣು.

7. ಗೆಲ್ಲು, ಮೆಲ್ಲು, ಕಳು, ಇರು.

8. ಹೊರು, ಆಸರು, ಎಚ್ಚರು, ತೆರೆ, ಬೇಸರು, ಹೆರು, ಅಳು, ಉಳು.

9. ಬೀಳು, ಏಳು.
10. ಕೀಳು.
11. ತರು, ಬರು, ಸಲ್ಲು, ಕೊಲ್ಲು.
12. ನಿಲ್ಲು.
13. ಇಡು, ಅಡು, ಉಡು, ಕೆಡು, ಕೊಡು, ತೊಡು, ನೆಡು, ಪಡು, ಬಿಡು, ಮಡು, ಸುಡು.
14. ನಗು, ಉಗು, ಬಿಗು, ಮಿಗು, ಹೊಗು.
15. ಬಾ, ಕೀ, ಬೀ.
16. ನೋ, ಬೇ, ವಿಾ.
17. ಈ, ಸಾ.
18. ಈನು.
19. ನೂಲು, ಆನು, ನೋನು, ಸೀನು, ಕೂರು, ಜೋಲು, ನೇಲು, ಸಾಲು, ಸೋಲು, ಹೇಲು, ಹೋಲು.
20. ಹೊರಡು, ಬಿಸಾಡು, ಬಿಸುಡು.
21. ಆಗು, ಹೋಗು.

85. ಪ್ರ. ಯಾವ ಧಾತುಗಳ ಭವಿಷ್ಯದ್ರೂಪಗಳು ವಿಕಾರವಾಗಿವೆ?

ಉ. "ಅನ್ನು"—ಅಂಬುವ. "ಎನ್ನು"—ಎಂಬುವ=ಎಂಬ. "ತಿನ್ನು"—ತಿಂಬುವ. "ಉಣ್ಣು"—ಉಂಬುವ. "ಕೊಳ್ಳು"—ಕೊಂಬುವ. "ಕಾಣು"—ಕಾಂಬುವ.

86. ಪ್ರ. ಯಾವ ಧಾತುಗಳ ನಿಷೇಧರೂಪಗಳು ವಿಕಾರವಾಗಿವೆ?

ಉ. "ತರು"—ತಾರದೆ, ತಾರದ, ತಾರೆನು—ಇತ್ಯಾದಿ.
"ಬರು"—ಬಾರದೆ, ಬಾರದ, ಬಾರೆನು—ಇತ್ಯಾದಿ.

87. ಪ್ರ. ಯಾವ ಧಾತುಗಳ ವಿಧಿರೂಪಗಳು ವಿಕಾರವಾಗಿವೆ?

ಉ. "ಕಾ, ಕೀ, ಕೇ, ಕೊ" ಮುಂತಾದ ಆ, ಈ, ಏ, ಐ, ಒ, ಓ ಕಾರಾಂತ ಧಾತುಗಳಿಗೆ ಮಧ್ಯಮಪುರುಷ ಏಕವಚನದ ವಿಧಿರೂಪಕ್ಕೆ 'ಇ' ಆಗಮ ಬರುವದು. ಉದಾ. ಕಾಯಿ, ಕೀಯಿ, ಕೇಯಿ, ಕೊಯಿ ಇತ್ಯಾದಿಗಳು. ಇದಲ್ಲದೆ "ತರು ಬರು" ಧಾ

ತುಗಳ ಮಧ್ಯಮಪುರುಷ ಏಕವಚನ ಬಹುವಚನ ರೂಪಗಳು ವಿಕಾರವಾಗಿವೆ, ಹ್ಯಾಗಂದರೆ:

"ತರು"—ತಾ (ತಾರೊ), (ತನ್ನಿ) ತರ್ರಿ.
"ಬರು"—ಬಾ (ಬಾರೊ), (ಬನ್ನಿ) ಬರ್ರಿ.

---

**88.** ಪ್ರ. ಮೇಲೆ ತೋರಿಸಿದಂತೆ ಎಲ್ಲಾ ಧಾತುಗಳ ಕ್ರಿಯಾಮಾಲೆಗಳು ಸಂಪೂರ್ಣವಾಗಿವೆಯೋ?

ಉ. ಇಲ್ಲಾ, ಕೆಲವು ಕ್ರಿಯಾಪದಗಳ ಕ್ರಿಯಾಮಾಲೆಯಲ್ಲಿ ಬಹಳ ರೂಪಗಳು ಊನವಾಗಿವೆ. ಆದದರಿಂದ ಅಂಥಾ ಕ್ರಿಯಾಪದಗಳಿಗೆ "ಊನಕ್ರಿಯಾಪದ" ಗಳೆಂದು ಅನ್ನ ತಕ್ಕದ್ದು. ಅವುಗಳಲ್ಲಿ ಕೆಲವುಗಳಿಗೆ ಪುರುಷಪ್ರತ್ಯಯಗಳು ಇಲ್ಲದ ಕಾರಣ, ಅವುಗಳಿಗೆ "ಅವ್ಯಯಕ್ರಿಯಾಪದ" ಗಳೆಂಬ ಹೆಸರು ಬಂತು.

**89.** ಪ್ರ. ಊನಕ್ರಿಯಾಪದಗಳು ಯಾವವು?

ಉ. ಕೆಳಗೆ ಬರೆದ ಊನಕ್ರಿಯಾಪದಗಳ ಕ್ರಿಯಾಮಾಲೆಯನ್ನು ನೋಡ ತಕ್ಕದ್ದು.

| | | | | | |
|---|---|---|---|---|---|
| ಏಕವಚನ. | ಉ. | ಆಪೆನು | ಆರೆನು | ವಲ್ಲೆನು | ಬಲ್ಲೆ |
| | ಮ. | ಆಪಿ | ಆರೆ | ವಲ್ಲಿ | ಬಲ್ಲಿ |
| | ಪ್ರ. ಪು. | ಆಪನು | ಆರನು | ವಲ್ಲನು | ಬಲ್ಲನು |
| | ಸ್ತ್ರೀ. | ಆಪಳು | ಆರಳು | ವಲ್ಲಳು | ಬಲ್ಲಳು |
| | ನಪು. | ಆಪದು | ಆರದು | ವಲ್ಲದು | ಬಲ್ಲದು |
| ಬಹುವಚನ. | ಉ. | ಆಪೆವು | ಆರೆವು | ವಲ್ಲೆವು | ಬಲ್ಲೆವು |
| | ಮ. | ಆಪಿರಿ | ಆರರಿ | ವಲ್ಲಿರಿ | ಬಲ್ಲಿರಿ |
| | ಪ್ರ. ಪು. ಸ್ತ್ರೀ. | ಆಪರು | ಆರರು | ವಲ್ಲರು | ಬಲ್ಲರು |
| | ನಪು. | ಆಪವು | ಆರವು | ವಲ್ಲವು | ಬಲ್ಲವು |
| ನ್ಯೂನ ಕೃದ್ವಾಚಿ | | ಆಪ | ಆರದೆ<br>ಆರದ | ವಲ್ಲದೆ<br>ವಲ್ಲದ | ಬಲ್ಲ |

90. ಪ್ರ. ಅವ್ಯಯಕ್ರಿಯಾಪದಗಳು ಯಾವವು?
ಉ. ಬೇಕು, ನಿಷೇಧ: ಬೇಡ, ಬಹುವಚನ: ಬೇಡಿರಿ;
ಸಾಕು, ನಿಷೇಧ: ಸಾಲದು, ಸಾಲದೆ, ಸಾಲದ;
ಉಂಟು, ಕೃದ್ವಾಚಿ: ಉಳ್ಳ;
ಇಲ್ಲ, ನ್ಯೂನ: ಇಲ್ಲದೆ, ಕೃದ್ವಾಚಿ: ಇಲ್ಲದ;
ಅಲ್ಲ, ನ್ಯೂನ: ಅಲ್ಲದೆ, ಕೃದ್ವಾಚಿ: ಅಲ್ಲದ;
ಅಹುದು (=ಹೌದು).
ಬಹುದು, ನಿಷೇಧ: ಬಾರದು, ಬಾರದೆ, ಬಾರದ.

91. ಪ್ರ. ಇನ್ನೊಂದು ವಿಧದ ಕ್ರಿಯಾಪದಗಳು ಯಾವವು?
ಉ. ನ್ಯೂನರೂಪಗಳಿಗೆ "ಇರು" ಧಾತುವನ್ನಾಗಲಿ ಅದರ ರೂಪಗಳನ್ನಾಗಲಿ ಅನುಬಂಧಿಸುವದರಿಂದ "ಸಂಯುಕ್ತಕ್ರಿಯಾಪದ" ಗಳು ಆಗುವವು.
ಉದಾ. ವರ್ತಮಾನನ್ಯೂನಕ್ಕೆ—ಮಾಡುತ್ತಿರು, ನುಡಿಯುತ್ತಿರು.
ಭೂತನ್ಯೂನಕ್ಕೆ— ಮಾಡಿರು, ನುಡಿದಿರು.
ನಿಷೇಧನ್ಯೂನಕ್ಕೆ— ಮಾಡದಿರು, ನುಡಿಯದಿರು.
ಈ ಸಂಯುಕ್ತಧಾತುಗಳಿಂದ ಉಳಿದ ಸಂಯುಕ್ತ ಅವ್ಯಯರೂಪ ಆಖ್ಯಾತರೂಪಗಳನ್ನೆಲ್ಲಾ ಹುಟ್ಟಿಸಲಾಗುತ್ತದೆ. ಹ್ಯಾಗಂದರೆ—

| | | ವರ್ತಮಾನ | ಭೂತ | ನಿಷೇಧ |
|---|---|---|---|---|
| ಸಂಯುಕ್ತ ನ್ಯೂನಗಳು. | ವರ್ತಮಾನ | ಮಾಡುತ್ತಿರುತ್ತಾ | ಮಾಡುತ್ತಿದ್ದು | ಮಾಡುತ್ತಿರದೆ |
| | ಭೂತ | ಮಾಡಿರುತ್ತಾ | ಮಾಡಿದ್ದು | ಮಾಡಿರದೆ |
| | ನಿಷೇಧ | ಮಾಡದಿರುತ್ತಾ | ಮಾಡದಿದ್ದು | ಮಾಡದಿರದೆ |
| ಸಂಯುಕ್ತ ಕೃದ್ವಾಚಿಗಳು. | ವರ್ತಮಾನ | ಮಾಡುತ್ತಿರುವ | ಮಾಡುತ್ತಿದ್ದ | ಮಾಡುತ್ತಿರದ |
| | ಭೂತ | ಮಾಡಿರುವ | ಮಾಡಿದ್ದ | ಮಾಡಿರದ |
| | ನಿಷೇಧ | ಮಾಡದಿರುವ | ಮಾಡದಿದ್ದ | ಮಾಡದಿರದ |

ಇವುಗಳ ಮೇಲೆ ೮೦ನೆ ಉತ್ತರದಲ್ಲಿ ವಿವರಿಸಿದ ವಿಧಿಗಳ ಪ್ರಕಾರ

ಪುರುಷಪ್ರತ್ಯಯಗಳನ್ನು ಹತ್ತಿಸುವದರಿಂದ ಸಂಯುಕ್ತ ಆಖ್ಯಾತ ರೂಪಗಳು ಆಗುವವು; ಹ್ಯಾಗಂದರೆ—

ಮಾಡುತ್ತಿರುತ್ತೇನೆ—ಮಾಡುತ್ತಿದ್ದೇನೆ, ಮಾಡುತ್ತಿದ್ದೆನು, ಮಾಡುತ್ತಿರುವೆನು, ಮಾಡುತ್ತಿರೆನು.
ಮಾಡಿರುತ್ತೇನೆ—ಮಾಡಿದ್ದೇನೆ, ಮಾಡಿದ್ದೆನು, ಮಾಡಿರುವೆನು, ಮಾಡಿರೆನು.
ಮಾಡದಿರುತ್ತೇನೆ—ಮಾಡದಿದ್ದೇನೆ, ಮಾಡದಿದ್ದೆನು, ಮಾಡದಿರುವೆನು, ಮಾಡದಿರೆನು.
} ಇತ್ಯಾದಿ

---

## 5. ಅವ್ಯಯಪ್ರಕರಣ.

92. ಪ್ರ. ಅವ್ಯಯಶಬ್ದವೆಂದರೇನು?
ಉ. ಕಾರಕವಿಭಕ್ತಿರೂಪಮಾಲೆಗೂ ಕ್ರಿಯಾಮಾಲೆಗೂ ಹೊರಗಾದ ಶಬ್ದಗಳಿಗೆ "ಅವ್ಯಯಶಬ್ದ"ಗಳೆಂಬ ಹೆಸರು.

93. ಪ್ರ. ಅವು ಎಷ್ಟು ವಿಧವು?
ಉ. ಅವವುಗಳ ಪ್ರಯೋಗದ ಪ್ರಕಾರ ಅವ್ಯಯಶಬ್ದಗಳು 5 ವಿಧವು; ಯಾವವಂದರೆ—"ಕ್ರಿಯಾವಿಶೇಷಣಾವ್ಯಯ, ಉಪಸರ್ಗಾವ್ಯಯ, ಸಮುಚ್ಚಯಕಾವ್ಯಯ, ಅನುಕರಣಾವ್ಯಯ, ಭಾವಬೋಧಕ ನಿಪಾತ".

94. ಪ್ರ. ಕ್ರಿಯಾವಿಶೇಷಣಾವ್ಯಯಗಳು ಯಾವವು?
ಉ. ಕ್ರಿಯೆಗಳು ಆಗುವ ಸ್ಥಾನ, ಕಾಲ, ರೀತಿಯನ್ನು ವಿಶೇಷಿಸುವದಕ್ಕೆ ಪ್ರಯೋಗವಾದ ಅವ್ಯಯಶಬ್ದಗಳಿಗೆ "ಕ್ರಿಯಾವಿಶೇಷಣಾವ್ಯಯ"ಗಳೆಂಬ ಹೆಸರು. ಅವು "ಸ್ಥಳವಾಚಕ, ಕಾಲವಾಚಕ, ರೀತಿವಾಚಕ", ಈ 3 ವಿಧವು.

95. ಪ್ರ. ಸ್ಥಳವಾಚಕ ಕ್ರಿಯಾವಿಶೇಷಣಗಳು ಯಾವವು?
ಉ. "ಎಲ್ಲಿ, ಇಲ್ಲಿ, ಅಲ್ಲಿ, ಎತ್ತ, ಇತ್ತ, ಅತ್ತ, ಈಚೆ, ಆಚೆ, ಸು

ತ್ತ, ಮೇಲೆ, ಕೆಳಗೆ, ಒಳಗೆ, ಹೊರಗೆ, ಮುಂದೆ, ಹಿಂದೆ"—ಇತ್ಯಾದಿ.

96. ಪ್ರ. ಕಾಲವಾಚಕ ಕ್ರಿಯಾವಿಶೇಷಣಗಳು ಯಾವವು?
ಉ. "ಎಂದು, ಇಂದು, ಅಂದು, ಈಗ, ಆಗ, ಮೊನ್ನೆ, ನಿನ್ನೆ, ಈ ಹೊತ್ತು, ನಾಳೆ, ನಾಡದು, ಬೆಳಿಗ್ಯೆ, ಸಂಜೆ, ಬೈಗು, ಮುಂಜೆ, ತರುವಾಯ, ಸದ್ಯ, ದಿನಾಲು, ಸರ್ವದಾ, ಇನ್ನು, ಮತ್ತು, ಬೈತಂಕ, ಒಮ್ಮೆ"—ಇತ್ಯಾದಿ.

97. ಪ್ರ. ರೀತಿವಾಚಕ ಕ್ರಿಯಾವಿಶೇಷಣಗಳು ಯಾವವು?
ಉ. "ಹ್ಯಾಂಗೆ, ಹೀಂಗೆ, ಹಾಂಗೆ, ಎಂತು, ಇಂತು, ಅಂತು, ಬೇಗೆ, ಮೆಲ್ಲಗೆ, ಭಗ್ಗನೆ, ಸುಮ್ಮನೆ, ನೆಟ್ಟಗೆ, ಕೆಂಪಗೆ, ಬೆಳ್ಳಗೆ, ತಣ್ಣಗೆ, ನುಣ್ಣಗೆ, ಸರಾಸರಿ"—ಇತ್ಯಾದಿ.

98. ಪ್ರ. ಉಪಸರ್ಗಗಳು ಯಾವವು?
ಉ. ಕೆಲವು ಅವ್ಯಯಶಬ್ದಗಳು ನಾಮಪದಗಳ ಸರ್ವನಾಮಗಳ ವಿಭಕ್ತಿಗಳಿಗೆ ಕೂಡಿ ಕೊಂಡು ಪ್ರಯೋಗವಾಗುವದರಿಂದ, ಅವುಗಳಿಗೆ "ಉಪಸರ್ಗ"ಗಳೆಂದು ಅನ್ನುತ್ತಾರೆ. ಅವುಗಳಲ್ಲಿ "ಪೂರ್ಣಉಪಸರ್ಗ, ಅರೆಉಪಸರ್ಗ" ಎಂಬ 2 ವಿಧವು.

99. ಪ್ರ. ಪೂರ್ಣಉಪಸರ್ಗಗಳು ಯಾವವು?
ಉ. "ಓಸ್ಕರ, ತುಸಕ, ತನಕ, ವರಿಗೆ, ಪರಿಯಂತರ, ಹಾಂಗೆ, ಸಂಗಡ, ಒಡನೆ, ಅಂತೆ", ಇವು ಮುಂತಾದವುಗಳು "ಪೂರ್ಣಉಪಸರ್ಗಗಳು", ಯಾಕಂದರೆ ಅವು ಯಾವಾಗಲೂ ಅವ್ಯಯಶಬ್ದಗಳಾಗಿ ಪ್ರಯೋಗವಾಗಿವೆ.

100. ಪ್ರ. ಅರೆಉಪಸರ್ಗಗಳು ಯಾವವು?
ಉ. "ಕೆಳಗೆ, ಒಳಗೆ, ಹೊರಗೆ, ಮೇಲೆ, ಬಳಿಕ, ತರುವಾಯ, ಹಿಂದೆ, ಮುಂದೆ, ಸುತ್ತ, ಹತ್ತರ, ವಿಷಯ, ಕಾರಣ, ನಿಮಿತ್ತ, ಮೂಲ, ಉದ್ದಿಶ್ಯ, ಪ್ರಕಾರ, ರೀತಿ, ಬೇರೆ, ಕಡೆ, ಬಳಿ", ಇವು ಮುಂ

ತಾದವುಗಳು "ಅರೆಉಪಸರ್ಗಗಳು", ಯಾಕಂದರೆ ಅವ್ಯಯ ಪ್ರ ಯೋಗವಲ್ಲದೆ ಅವುಗಳಿಗೆ ಇನ್ನು ನಾಮಪದಗಳ ಪ್ರಯೋಗ ಬ ರುವದು. "ಮುಖಾಂತರ, ಮುಖದಿಂದ, ದೆಶೆಯಿಂದ, ಕಡೆಯಿಂ ದ, ಕಡೆಗೆ, ಬಳಿಗೆ, ಬಳಿಯಲ್ಲಿ, ಹತ್ತೀಲಿ, ಬದೀಲಿ, ಮುಟ್ಟಿಗೆ, ಓಪಾ ದಿಯಲ್ಲಿ", ಇವು ಮುಂತಾದವುಗಳು ಉಪಸರ್ಗಗಳಾಗಿ ಪ್ರಯೋ ಗಿಸುವ ವಿಭಕ್ತಿರೂಪಗಳು.

101. ಪ್ರ. ಸಮುಚ್ಚಯಕಾವ್ಯಯಗಳು ಯಾವವು?

ಉ. ಎರಡು ಶಬ್ದಗಳನ್ನಾಗಲಿ, ಎರಡು ವಾಕ್ಯಗಳನ್ನಾಗಲಿ ಅನ್ವ ಯದಲ್ಲಿ ಕೂಡಿಸುವ ಅವ್ಯಯಗಳಿಗೆ "ಸಮುಚ್ಚಾಯಕ"ಗಳೆಂಬ ಹೆಸರು. ಅವುಗಳಲ್ಲಿ ಕೆಲವು "ಅವ್ಯಯಶಬ್ದಗಳು", ಕೆಲವು ತಮ್ಮ ಲ್ಲಿ ಅರ್ಥವಿಲ್ಲದ "ನಿಪಾತಗಳು".

102. ಪ್ರ. ಶಬ್ದಗಳಾದ ಸಮುಚ್ಚಾಯಕಗಳು ಯಾವವು?

ಉ. "ಸಹ, ಸಹಿತ, ಸುದಾ, ಅಥವಾ, ಪರಂತು, ಮತ್ತು, ಇ ನ್ನು"—ಇತ್ಯಾದಿ.

103. ಪ್ರ. ನಿಪಾತಗಳಾದ ಸಮುಚ್ಚಾಯಕಗಳು ಯಾವವು?

ಉ. "ಊ, ಆ, ಏ, ಓ, ರೆ, ರೂ (=ರೆ-ಊ)," ಇತ್ಯಾದಿ.

104. ಪ್ರ. ಅನುಕರಣಾವ್ಯಯಗಳು ಯಾವವು?

ಉ. ಪಶು ಮೃಗಾದಿಗಳ ಕೂಗುಗಳನ್ನೂ, ಘಂಟೆ ತುಬಾಕಿ ಮುಂ ತಾದ ಸಾಮಾನುಗಳ ನಾದಗಳನ್ನೂ, ಬೇರೆ ಬೇರೆ ಸಪ್ಪಳಗಳನ್ನೂ ಅನುಕರಿಸುವದಕ್ಕೆ ಕನ್ನಡ ಜನರು ಬಹಳವಾಗಿ ಪ್ರಯೋಗಿಸುವ ಅವ್ಯಯಶಬ್ದಗಳು "ಅನುಕರಣಶಬ್ದ"ಗಳೆಂದು ವ್ಯವಹರಿಸುವವು. ಉದಾ.

ಕೂಗುಗಳು—ಅಂಬಾ, ಒಮ್ಮಿ, ಮ್ಯಾ ಮ್ಯಾಂವು, ಕೋ ಕೋ.

ನಾದಗಳು—ಘಣ್‌ಘಣ್ಣನೆ, ಭೌಂ ಭೌಂ, ಕಿಣಿಕಿಣಿ.

ಸಪ್ಪಳಗಳು—ಪರಪರನೆ, ಲೊಟ್‌ಲೊಟನೆ, ಧಡಲ್‌ಧಡಲ್ಲನೆ.

105. ಪ್ರ. ಭಾವಬೋಧಕ ನಿಪಾತಗಳು ಯಾವವು?

ಉ. ಮನಸ್ಸಿನ ಭಾವಗಳನ್ನು ಉಚ್ಚರಿಸುವದಕ್ಕೆ ಪ್ರಯೋಗಿಸುವ ಅವ್ಯಯಶಬ್ದಗಳು "ಭಾವಬೋಧಕನಿಪಾತ"ಗಳೆಂದು ವರ್ತಿಸುವವು.

ವ್ಯಾಕುಲ—ಅಯ್ಯೋ, ಅಯಯ್ಯೋ, ಅಹಹ, ಅಕಟ, ಓಯೆನೆ.
ಸಂಭ್ರಮೆ—ಆಃ, ಅಬ್ಬಾ, ಅಮಮ, ಅಲಲಾ, ಓ ಹೋ ಹೋ.
ಮೆಚ್ಚಿಕೆ—ಶಹಬಾಸ, ಐಶಬಾಸ, ಭಲಾ, ಅಝಾ, ಆರೆಜಾಣಾ.
ಹೇಸಿಕೆ—ಚೀ, ಛೀಛೀ, ಇಶಿ, ಅಖ, ಊಹೂಯೆನೆ. —ಇತ್ಯಾದಿ.

ಮೂರನೇ ಭಾಗ.

# ವಾಕ್ಯಖಂಡ.

## 1. ಆಖ್ಯಾತಪ್ರಕರಣ.

106. ಪ್ರ. ವಾಕ್ಯವೆಂದರೇನು?

ಉ. ಒಂದು ಆಲೋಚನೆಯನ್ನು ಹೇಳುವ ಮಾತು "ವಾಕ್ಯ"ವೆಂದೆನ್ನಿಸುವದು. ಆದರಲ್ಲಿ "ಆಖ್ಯೆ, ಆಖ್ಯಾತ", ಈ ಎರಡು ಪದಗಳು ಮುಖ್ಯವು.

107. ಪ್ರ. ಆಖ್ಯೆಪದವೂ ಆಖ್ಯಾತಪದವೂ ಯಾವವು?

ಉ. ಕ್ರಿಯೆ ಮಾಡುವ ವಸ್ತುವನ್ನು ಹೇಳುವ ಪದವೇ "ಆಖ್ಯೆಪದವು", ಆ ಕರ್ತೃವಿನ ವಿಷಯವಾಗಿ ಹೇಳಿದ್ದೇ "ಆಖ್ಯಾತ"ವೆಂದೆನ್ನಿಸುವದು. ಉದಾ. ಮನುಷ್ಯನು ಸಾಯುತ್ತಾನೆ; ಈ ವಾಕ್ಯದಲ್ಲಿ 'ಮನುಷ್ಯನು' ಎಂಬದು ಆಖ್ಯೆಪದ, 'ಸಾಯುತ್ತಾನೆ' ಎಂಬುವದು ಆಖ್ಯಾತಪದ.

108. ಪ್ರ. ಆಖ್ಯೆಪದಕ್ಕೂ ಆಖ್ಯಾತಪದಕ್ಕೂ ಇರುವ ಪರಸ್ಪರ ಸಂಬಂಧವೇನು?

ಉ. ಆಖ್ಯೆಪದಕ್ಕೆ ಯಾವ ಪುರುಷ, ಲಿಂಗ, ವಚನವು ಇರುವದೋ, ಅದೇ ಆಖ್ಯಾತಪದಕ್ಕೂ ಬರುವದು. ಉದಾ.

| | ಏಕವಚನ: | ಬಹುವಚನ: |
|---|---|---|
| ಉತ್ತಮ ಪುರುಷ | ನಾನು ಮಾಡಿದೆನು | ನಾವು ಮಾಡಿದೆವು |
| ಮಧ್ಯಮ ಪುರುಷ | ನೀನು ಮಾಡಿದಿ | ನೀವು ಮಾಡಿದಿರಿ |
| ಪ್ರಥಮ ಪುರುಷ ಪು. | ಹುಡುಗನು ಮಾಡಿದನು | ಹುಡುಗರು ಮಾಡಿದರು |
| ಸ್ತ್ರೀ. | ಹಿರಿಯಳು ಮಾಡಿದಳು | ಹಿರಿಯರು ಮಾಡಿದರು |
| ನಪು. | ಕೈ ಮಾಡಿತು | ಕೈಗಳು ಮಾಡಿದವು |

109. ಪ್ರ. ಒಂದು ವಾಕ್ಯದಲ್ಲಿ ಅನೇಕ ಆಖ್ಯೆಪದಗಳು ಇದ್ದರೆ, ಆಖ್ಯಾತಪದದ ಪುರುಷ, ಲಿಂಗ, ವಚನವು ಹ್ಯಾಗೆ?

ಉ. ಇದರ ವಿಷಯದ ವಿಧಿಗಳು ಯಾವವಂದರೆ:—

1ನೇ. ಏಕವಚನದ ರೂಪವಾದ ಅನೇಕ ಆಖ್ಯೆಪದಗಳ ಮುಂದೆ ಆಖ್ಯಾತಪದಕ್ಕೆ ಬಹುವಚನದ ರೂಪ ಬರುವದು. ಉದಾ. ತಂದೆಯೂ ಮಗನೂ ಬಂದರು. ಆಕಳೂ ಕರುವೂ ಸತ್ತವು.

2ನೇ. ಭಿನ್ನ ಲಿಂಗವಾದ ಅನೇಕ ಆಖ್ಯೆಪದಗಳ ಮುಂದೆ ಆಖ್ಯಾತಪದಕ್ಕೆ ಕಡೇ ಆಖ್ಯೆಪದದ ಲಿಂಗವು ಬರುವದು. ಉದಾ. ರಾಜನೂ, ರಾಣಿಯೂ, ಪಟ್ಟದ ಆನೆಯೂ ಬಂದವು.

3ನೇ. ಭಿನ್ನ ಪುರುಷವಾದ ಅನೇಕ ಆಖ್ಯೆಪದಗಳ ಮುಂದೆ ಆಖ್ಯಾತಪದಕ್ಕೆ ಅಧಿಕ ಪುರುಷ ಬರುವದು. ಅಧಿಕ ಪುರುಷ ಯಾವದಂದರೆ—ಪ್ರಥಮ ಪುರುಷಕ್ಕಿಂತ ಮಧ್ಯಮ ಪುರುಷ ಅಧಿಕ, ಮಧ್ಯಮ ಪುರುಷಕ್ಕಿಂತ ಉತ್ತಮ ಪುರುಷ ಅಧಿಕ. ಉದಾ. ನೀನೂ ಅವನೂ ಬಂದಿರಿ. ನಾನೂ ನೀನೂ ಬಂದೆವು.

110. ಪ್ರ. ಆಖ್ಯಾತ ಕ್ರಿಯಾಪದಗಳಿಗೆ ಬರುವ ಕಾಲಭೇದ ಅರ್ಥಭೇದಗಳು ಯಾವವು?

ಉ. ವರ್ತಮಾನ, ಭೂತ, ಭಾವಿ, ಭವಿಷ್ಯತ್ತು, ಈ 4 ಕಾಲ ಭೇದಗಳು; ನಿಷೇಧ, ವಿಧಿ, ಇವು ಅರ್ಥಭೇದಗಳು.

111. ಪ್ರ. ವರ್ತಮಾನ ಕ್ರಿಯಾಪದಗಳ ಅರ್ಥವೇನು?

ಉ. ಮಾತನಾಡುವ ಸಮಯದಲ್ಲಿ ಇನ್ನು ನಡಿಯುವ ಕ್ರಿಯೆಯನ್ನು ಹೇಳುವದಕ್ಕೆ ವರ್ತಮಾನ ಕ್ರಿಯಾಪದಗಳು ಪ್ರಯೋಗವಾಗಿವೆ. ಉದಾ. ನಾನು ಓದುತ್ತೇನೆ.

ಇದಲ್ಲದೆ ಮುಂದೆ ಆಗುವ ಕ್ರಿಯೆ ಬಹಳ ನಿಶ್ಚಯವಾಗಿ ಆಗುವದೆಂಬ ಅರ್ಥವನ್ನು ಹೇಳುವದಕ್ಕೆ ವರ್ತಮಾನಕ್ರಿಯಾಪದಗಳು ಪ್ರಯೋಗವಾಗಿವೆ. ಉದಾ. ನಾಳೆ ಬರುತ್ತೇನೆ.

112. ಪ್ರ. ಭೂತಕಾಲದ ಕ್ರಿಯಾಪದಗಳ ಅರ್ಥವೇನು?

ಉ. ಒಂದು ಸಮಯದಲ್ಲಿ ಒಂದು ಕ್ರಿಯೆ ನಡಿಯಿತೆಂಬ ಸಾಧಾರಣ ಅರ್ಥವನ್ನು ಹೇಳುವದಕ್ಕೆ ಭೂತ ಕ್ರಿಯಾಪದಗಳು ಪ್ರಯೋಗವಾಗುತ್ತವೆ. ಉದಾ. ಅವನು ಹೋದನು; ನಾನು ಬಂದೆನು. ಇದಲ್ಲದೆ ಮುಂದೆ ಆಗುವ ಕ್ರಿಯೆ ಅತಿ ತೀವ್ರವಾಗಿ ಆಗುವದೆಂಬ ಅರ್ಥ ತೋರಿಸುವದಕ್ಕೆ ಭೂತಕ್ರಿಯಾಪದವನ್ನು ಪ್ರಯೋಗಿಸುವದು ಉಂಟು. ಉದಾ. ಈಗಲೇ ಬಂದೆನು.

113. ಪ್ರ. ಭವಿಷ್ಯತ್ಕಾಲದ ಕ್ರಿಯಾಪದಗಳ ಅರ್ಥವೇನು?

ಉ. ಮಾತನಾಡುವಾಗ ಇನ್ನು ಮುಂದೆ ಇರುವ ಕಾಲದಲ್ಲಿ ಆಗಲಿಕ್ಕಿರುವ ಕ್ರಿಯೆಯನ್ನು ಹೇಳುವದಕ್ಕೆ ಭವಿಷ್ಯತ್ ಭಾವಿಕ್ರಿಯಾಪದಗಳು ಪ್ರಯೋಗವಾಗುತ್ತವೆ. ಉದಾ. ನಾನು ಹೋಗುವೆನು; ಅವನು ಬಂದಾನು.

ಇದಲ್ಲದೆ ಒಬ್ಬನು ಒಂದು ಕ್ರಿಯೆಯನ್ನು ಬೈತಂಕ ಮಾಡುವದರಿಂದ ಅದನ್ನು ಮಾಡುವದು ಅವನಿಗೆ ರೂಢಿ ಬಿತ್ತು ಎಂಬ ಅರ್ಥವನ್ನು ಹೇಳುವದಕ್ಕೆ ಭಾವಿಕ್ರಿಯಾಪದಗಳು ಪ್ರಯೋಗವಾಗಿವೆ. ಉದಾ. ದುಷ್ಟರು ಮತ್ತೊಬ್ಬರನ್ನು ಕೆಡಿಸುವರು. ಇದಲ್ಲದೆ ಭವಿಷ್ಯತ್

ಕ್ರಿಯಾಪದಗಳಿಗೆ ಶಕ್ಯಾರ್ಥವೂ ಸಂಶಯಾರ್ಥವೂ ಬರುವದು. ಉದಾ. ಈ ಕೆಲಸ ಮಾಡೇನು. ದುಷ್ಟರು ದೇವರನ್ನು ತಿಳಿದಾರೇ?

**114.** ಪ್ರ. ನಿಷೇಧಕ್ರಿಯಾಪದಗಳ ಅರ್ಥವೇನು?

ಉ. ಧಾತು ಹೇಳುವ ಕ್ರಿಯೆ ಹಿಂದೆ ನಡಿಯಲಿಲ್ಲ, ಈಗ ನಡಿಯುವದಿಲ್ಲ, ಮುಂದೆ ನಡಿಯಲಿಕ್ಕಿಲ್ಲವೆಂಬ ಅರ್ಥ ಹೇಳುವದಕ್ಕೆ ನಿಷೇಧ ಕ್ರಿಯಾಪದಗಳು ಪ್ರಯೋಗವಾಗುತ್ತವೆ. ಅವುಗಳಿಗೆ ಕಾಲಭೇದಗಳು ಹತ್ತುವದಿಲ್ಲ. ಉದಾ. ದೇವರು ಪಾಪ ಮಾಡನು.

**115.** ಪ್ರ. ವಿಧಿಕ್ರಿಯಾಪದಗಳ ಅರ್ಥವೇನು?

ಉ. ಉತ್ತಮ ಪುರುಷದ ವಿಧಿರೂಪಗಳು ಒಬ್ಬನು ಮಾಡಲಿಕ್ಕೆ ತನ್ನ ಮನಸ್ಸಿನಲ್ಲಿ ನಿಷ್ಕರ್ಷಿಸಿದ ಕ್ರಿಯೆಯನ್ನು ಹೇಳುವವು. ಉದಾ. ಪಟ್ಣಕ್ಕೆ ಹೋಗುವಾ; ಮನೆಗೆ ಶೇರೋಣ. ಮಧ್ಯಮ ಪುರುಷದ ವಿಧಿರೂಪಗಳು ಒಬ್ಬನು ಮತ್ತೊಬ್ಬನಿಗೆ ಆಜ್ಞಾಪಿಸುವ ಕ್ರಿಯೆಯನ್ನು, ಅಥವಾ ಅವನ ಕಡೆಯಿಂದ ಬೇಡುವ ಕ್ರಿಯೆಯನ್ನು ಹೇಳುವವು. ಉದಾ. ಅಲ್ಲಿಗೆ ಹೋಗು; ದಯ ಮಾಡಿ ಬನ್ನಿ; ದೇವರೇ ಸಲಹು! ಪ್ರಥಮ ಪುರುಷದ ವಿಧಿರೂಪಗಳು ಒಬ್ಬನು ಅಪ್ಪಣೆ ಕೊಡುವ ಕ್ರಿಯೆಯನ್ನು ಅಥವಾ ಆಶೆ ಮಾಡುವ ಕ್ರಿಯೆಯನ್ನು ಹೇಳುತ್ತವೆ. ಉದಾ. ಹುಡುಗರು ವಿದ್ಯ ಕಲಿಯಲಿ. ಅವರಿಗೆ ಬುದ್ಧಿ ಬರಲಿ.

**116.** ಪ್ರ. ಅನುಬಂಧಕ್ರಿಯಾಪದಗಳ ಪ್ರಯೋಗ ಹ್ಯಾಗೆ?

ಉ. ಕ್ರಿಯಾಪದಗಳ ಸ್ವರೂಪಗಳಿಂದ ಕಾಣ ಬಾರದ ಅರ್ಥವಿಶೇಷಣಗಳನ್ನು ಹೇಳುವದಕ್ಕೆ ಅನುಬಂಧಕ್ರಿಯಾಪದಗಳು ಧಾತುಗಳ ಭಾವಾರ್ಥಕರೂಪಗಳ ಮೇಲೆ ಬರುತ್ತವೆ. ಅವು ಯಾವವಂದರೆ: "ಇರು, ಇಲ್ಲ, ಆಪೆನು, ಆರೆನು, ಬಲ್ಲೆನು, ಅರಿಯೆನು, ವಲ್ಲೆನು, ಆಗುವದು, ಆಗದು, ಕೂಡದು, ಬಹುದು, ಬಾರದು, ಬೇಕು, ಬೇಡ, ಮಾಡು, ಕೊಡು, ಪಡು"--ಇತ್ಯಾದಿ.

117. ಪ್ರ. ಆಖ್ಯಾತಕ್ರಿಯಾಪದಗಳ ಪ್ರಯೋಗಗಳು ಎಷ್ಟು ವಿಧವು?
ಉ. "ಕರ್ತರಿಪ್ರಯೋಗ, ಕರ್ಮಣಿಪ್ರಯೋಗ, ಭಾವಿಪ್ರಯೋಗ, ಆತ್ಮನೇಪದ", ಈ 4 ವಿಧವು.

118. ಪ್ರ. ಕರ್ತರಿಪ್ರಯೋಗ ಹ್ಯಾಗೆ?
ಉ. ಕ್ರಿಯೆಯನ್ನು ಮಾಡುವ ವಸ್ತು ಅದರ ಕರ್ತೃವೆಂದೆನ್ನಿಸುವದು. ಅದು ಆಖ್ಯೆಯಾಗಿದ್ದು, ಆ ಆಖ್ಯೆಪದಕ್ಕೆ ಕ್ರಿಯಾಪದದ ಪುರುಷಪ್ರತ್ಯಯವು ಅನುಸಾರವಾದರೆ, "ಕರ್ತರಿಪ್ರಯೋಗ"ವೆಂದೆನ್ನಿಸುವದು. ಉದಾ. ರಾಜನು ಊರುಗಳನ್ನು ಆಳುತ್ತಾನೆ. ಈ ವಾಕ್ಯದಲ್ಲಿ 'ರಾಜನು' ಎಂಬುವದು ಕರ್ತೃಪದವು, ಅದಕ್ಕೆ 'ಆಳುತ್ತಾನೆ' ಎಂಬ ಕ್ರಿಯಾಪದವು ಅನುಸಾರವಾಗಿರುವದರಿಂದ "ಕರ್ತರಿಪ್ರಯೋಗ"ವೆಂದೆನ್ನಿಸುವದು.

119. ಪ್ರ. ಕರ್ಮಣಿಪ್ರಯೋಗ ಹ್ಯಾಗೆ?
ಉ. ಕ್ರಿಯಾಪದದ ಪುರುಷಪ್ರತ್ಯಯವು ಕರ್ತೃಪದಕ್ಕೆ ಅಲ್ಲ, ಕರ್ಮಪದದ ಹಾಗಿರುವ ಆಖ್ಯೆಪದಕ್ಕೆ ಅನುಸಾರವಾಗಿದ್ದರೆ, "ಕರ್ಮಣಿಪ್ರಯೋಗ"ವೆಂದೆನ್ನಿಸುವದು. ಉದಾ. ರಾಜನಿಂದ ಊರುಗಳು ಆಳಲ್ಪಡುತ್ತವೆ. ಈ ವಾಕ್ಯದಲ್ಲಿ 'ಆಳು' ಎಂಬ ಧಾತುವಿನ ಭಾವಾರ್ಥಕರೂಪಕ್ಕೆ 'ಪಡು' ಎಂಬ ಅನುಬಂಧಕ್ರಿಯಾಪದ ಕೂಡಿ ಕೊಂಡು, ಅದರ ಪುರುಷಪ್ರತ್ಯಯವು ಕ್ರಿಯೆ ಮಾಡುವ ಕರ್ತೃಪದವಾದ ರಾಜನಿಂದ ಎಂಬದನ್ನಲ್ಲ, ಊರುಗಳೆಂಬ ಕರ್ಮಪದವನ್ನು ಅನುಸರಿಸಿ ಅದೆ. ಕರ್ಮಣಿಪ್ರಯೋಗದಲ್ಲಿ ಕರ್ತೃಪದಕ್ಕೆ ತೃತೀಯಾ ವಿಭಕ್ತಿಯೂ, ಕರ್ಮಪದಕ್ಕೆ ಪ್ರಥಮಾ ವಿಭಕ್ತಿಯೂ ಬರುವದು.

120. ಪ್ರ. ಕರ್ಮಣಿಪ್ರಯೋಗದ ವ್ಯವಹಾರವು ಕನ್ನಡ ಜನರಲ್ಲಿ ಉಂಟೋ?
ಉ. ಪೂರ್ವಿಕರ ರಚಿತಶಾಸ್ತ್ರಗಳಲ್ಲಿ ಕರ್ಮಣಿಪ್ರಯೋಗವು ಅ

ಪೂರ್ವವಾಗಿ ವ್ಯವಹರಿಸುವದು. ಆದಾಗ್ಯೂ ಕನ್ನಡ ಜನರ ಸಾಧಾರಣ ಪ್ರಯೋಗದಲ್ಲಿ ಅದು ಕಡಿಮೆ.

121. ಪ್ರ. ಭಾವಿಪ್ರಯೋಗ ಹ್ಯಾಗೆ?
ಉ. ಕರ್ತೃಪದಕ್ಕೆ ಅಥವಾ ಕರ್ಮಪದಕ್ಕೆ ಅನುಸಾರವಾದ ಆಖ್ಯಾತಕ್ರಿಯಾಪದ ಬಿಟ್ಟು, ಅದರ ಸ್ಥಳದಲ್ಲಿ ಭಾವಾರ್ಥರೂಪಕ್ಕೆ ಅಥವಾ ಭಾವಾರ್ಥ ಹೇಳುವ ಕ್ರಿಯಾನಾಮವಾಚಕಕ್ಕೆ "ಆಗು" ಎಂಬ ಧಾತುವಿನ ನಪುಂಸಕ ಏಕವಚನರೂಪ ಕೂಡಿಸಿದರೆ, "ಭಾವಿಪ್ರಯೋಗ"ವೆಂದೆನ್ನಿಸುವದು. ಉದಾ. ರಾಜನಿಂದ ದೇಶ ಆಳೋಣವಾಗುವದು. ದೇವರಿಂದ ಲೋಕವು ನಿರ್ಮಿಸೋಣವಾಯಿತು. ಜೀವವನ್ನು ನೋಡಲಾಗದು. ಅದನ್ನು ನಿಶ್ಚೈಸಲಾದೀತು.

122. ಪ್ರ. ಆತ್ಮನೇಪದದ ಪ್ರಯೋಗವು ಹ್ಯಾಗೆ?
ಉ. ಒಬ್ಬನು ಮಾಡುವ ಕ್ರಿಯೆಯ ಫಲವನ್ನು ತಾನೇ ಅನುಭವಿಸುತ್ತಾನೆಂದು, ಅಥವಾ ಎರಡನೆಯವನ ಕಡೆಯಿಂದ ಅನುಭವಿಸುವ ಕ್ರಿಯೆಗೆ ತಾನೇ ಕಾರಣವಾಗಿದ್ಧೇನೆಂದು ಹೇಳುವದಕ್ಕೆ, ಧಾತುಗಳ ಭೂತನ್ಯೂನಕ್ಕೆ "ಕೊಳ್ಳು" ಯೆಂಬ ಉಪಕ್ರಿಯೆಯನ್ನು ಜೋಡಿಸಿದರೆ, "ಆತ್ಮನೇಪದ ಪ್ರಯೋಗ"ವೆಂದು ವ್ಯವಹರಿಸುವದು. ಉದಾ. ಅರ್ಜಿ ಬರ ಕೊಂಡಿದ್ಧೇನೆ. ಸಾಲಗಾರನಿಂದ ಪತ್ರವನ್ನು ಬರಸಿ ಕೊಂಡನು. ಕಂಡವರನ್ನ ಬೈದು, ಹೊಡಿಸಿ ಕೊಂಡಿಯಾ? ಅರಸನಿಂದ ಪ್ರಜೆಗಳು ಆಳಿಸಿ ಕೊಳ್ಳುತ್ತಾರೆ.

---

## 2. ಕಾರಕಪ್ರಕರಣ.

123. ಪ್ರ. ಕಾರಕವೆಂದರೇನು?
ಉ. ವಾಕ್ಯದಲ್ಲಿ ಯಾವ ಶಬ್ದಗಳಿಂದ ಕ್ರಿಯಾಪದದ ಅರ್ಥವು ಸಂಪೂರ್ಣವಾಗುವದೋ ಅವುಗಳಿಗೆ ಕಾರಕಾರ್ಥ ಉಂಟು.

124. ಪ್ರ. ಕಾರಕಾರ್ಥಗಳು ಎಷ್ಟು ವಿಧವು?

ಉ. "ಕರ್ತೃ, ಕರ್ಮ, ಮೂಲ, ಯೋಗ, ಸ್ಥಳ, ಕಾಲ, ರೀತಿ", ಈ 7 ಕಾರಕಾರ್ಥಗಳು.

125. ಪ್ರ. ಕರ್ತೃವೆಂದರೇನು?

ಉ. ಯಾವದು ಕ್ರಿಯೆಯನ್ನು ಮಾಡುವದೋ, ಅದು ಆ ಕ್ರಿಯೆಗೆ "ಕರ್ತೃ" ಅದನ್ನು ಕೇಳುವ ಪ್ರಶ್ನೆಗಳು—ಯಾರು? ಏನು?

ಉದಾ. ಮನುಷ್ಯರು ಸಾಯುತ್ತಾರೆ. ಘಾಳಿ ಬೀಸುವದು.

126. ಪ್ರ. ಕರ್ಮವೆಂದರೇನು?

ಉ. ಯಾವದನ್ನು ಕ್ರಿಯೆಯು ತಗಲುವದೋ, ಅದು ಆ ಕ್ರಿಯೆಯ "ಕರ್ಮ"ವೆಂದೆನ್ನಿಸುವದು. ಅದನ್ನು ಕೇಳುವ ಪ್ರಶ್ನೆಗಳು—ಯಾರನ್ನು? ಏನನ್ನು?

ಉದಾ. ಹುಡುಗನನ್ನು ಕರೆ. ಪುಸ್ತಕವನ್ನು ಓದು.

127. ಪ್ರ. ಮೂಲವೆಂದರೇನು?

ಉ. ಯಾವದರಿಂದ ಕ್ರಿಯೆಯು ಉತ್ಪತ್ತಿ ಆಗುವದೋ, ಅದು ಆ ಕ್ರಿಯೆಗೆ "ಮೂಲ". ಕ್ರಿಯೆಯ ಮೂಲವನ್ನು ಕೇಳುವ ಪ್ರಶ್ನೆಗಳು—ಯಾರಿಂದ? ಯಾತರಿಂದ?

ಉದಾ. ತಂದೆ ತಾಯಿಗಳಿಂದ ಮಕ್ಕಳು ಹುಟ್ಟುತ್ತಾರೆ. ಲೇಖನಿಯಿಂದ ಅಕ್ಷರಗಳನ್ನು ಬರೆ. ಸಂತೋಷದಿಂದ ನಕ್ಕನು.

128. ಪ್ರ. ಯೋಗಾರ್ಥವೆಂದರೇನು?

ಉ. ಯಾವದಕ್ಕೆ ಕ್ರಿಯೆಯು ಕೂಡುವದೋ, ಅದು ಆ ಕ್ರಿಯೆಯ "ಯೋಗಾರ್ಥ"ವನ್ನು ಹೇಳುವದು. ಅದನ್ನು ಕೇಳುವ ಪ್ರಶ್ನೆಗಳು—ಯಾರಿಗೆ? ಯಾತಕ್ಕೆ? ಯಾಕೆ?

ಉದಾ. ಹಿರಿಯರಿಗೆ ಮಾನ ಕೊಡು. ಅವರ ಮಾತಿಗೆ ಒಳಗಾಗು. ಜಾಣನಾಗುವದಕ್ಕೆ ವಿದ್ಯಾಭ್ಯಾಸ ಮಾಡು.

129. ಪ್ರ. ಸ್ಥಳವೆಂದರೇನು?

ಉ. ಯಾವಲ್ಲಿ ಕ್ರಿಯೆಯು ನಡಿಯುವದೋ, ಅದು ಆ ಕ್ರಿಯೆಗೆ "ಸ್ಥಳ"ವಾಗಿದೆ. ಅದನ್ನು ಕೇಳುವ ಪ್ರಶ್ನೆಗಳು—ಯಾರಲ್ಲಿ? ಯಾತರಲ್ಲಿ? ಎಲ್ಲಿ?

ಉದಾ. ದುಷ್ಟರಲ್ಲಿ ಗೆಳೆತನ ಮಾಡ ಬಾರದು. ಪುಸ್ತಕದಲ್ಲಿ ಅಕ್ಷರಗಳನ್ನು ನೋಡು. ಶಾಲೆಯಲ್ಲಿ ವಿದ್ಯೆಗಳನ್ನು ಕಲಿ.

"ಹೋಗು, ಬರು, ನಡಿ, ಓಡು" ಮೊದಲಾದ ಗಮನಾರ್ಥಕ ಧಾತುಗಳೊಡನೆ ಬರುವ ಪ್ರಶ್ನೆಗಳು ಯಾವವಂದರೆ—

ಹೊರಡುವ ಸ್ಥಳವನ್ನು ಕೇಳುವ ಪ್ರಶ್ನೆ—ಎಲ್ಲಿಂದ?

ಉದಾ. ಮನೆಯಿಂದ ಬಂದನು. ಮುಟ್ಟುವ ಸ್ಥಳವನ್ನು ಕೇಳುವ ಪ್ರಶ್ನೆ—ಎಲ್ಲಿಗೆ? ಉದಾ. ಊರಿಗೆ ಹೋದನು.

130. ಪ್ರ. ಕಾಲವೆಂದರೇನು?

ಉ. ಕ್ರಿಯೆಯ ಕಾಲವನ್ನು ಕೇಳುವ ಪ್ರಶ್ನೆಗಳು 4 ವಿಧವಾಗಿವೆ. ಹ್ಯಾಗಂದರೆ—

1ನೇ.—ಕ್ರಿಯೆಯು ನಡಿಯುವ ಸಮಯವನ್ನು ಕೇಳುವ ಪ್ರಶ್ನೆ—ಎಂದು? ಯಾವಾಗ?

ಉದಾ. ಈ ಕ್ಷಣದಲ್ಲಿ ಬಾ. ಮಧ್ಯಾಹ್ನದಲ್ಲಿ ಹೋದನು.

2ನೇ.—ಕ್ರಿಯೆಯು ಆರಂಭವಾದ ಕಾಲವನ್ನು ಕೇಳುವ ಪ್ರಶ್ನೆ—ಎಂದಿನಿಂದ?

ಉದಾ. ಹೋದ ವರುಷದಿಂದ ರೋಗದಲ್ಲಿ ಇದ್ದಾನೆ.

3ನೇ.—ಕ್ರಿಯೆಯು ಮುಗಿಯುವ ಕಾಲವನ್ನು ಕೇಳುವ ಪ್ರಶ್ನೆ—ಎಂದಿಗೆ?

ಉದಾ. ನಾಲ್ಕು ದಿನಕ್ಕೆ ಬಂದನು.

4ನೇ.—ಕ್ರಿಯೆಯು ನಡಿಯುವ ಕಾಲದ ಪರಿಮಾಣವನ್ನು ಕೇಳುವ ಪ್ರಶ್ನೆ—ಎಷ್ಟು ಕಾಲ?

ಉದಾ. ಒಂದು ವರುಷ ಅಲ್ಲಿ ಇದ್ದನು.

131. ಪ್ರ. ರೀತಿ ಎಂದರೇನು?

ಉ. ಯಾವ ಬಗೆಯಿಂದ ಕ್ರಿಯೆಯು ನಡಿಯುವದೊ, ಅದು ಆ ಕ್ರಿಯೆಯ ರೀತಿಯಾಗಿದೆ. ಅದನ್ನು ಕೇಳುವ ಪ್ರಶ್ನೆ—ಹ್ಯಾಗೆ?

ಉದಾ. ಅವಸರದಿಂದ ಹೋದನು, ಅವಕಾಶದಿಂದ ಬಂದನು.

132. ಪ್ರ. ವಾಕ್ಯದಲ್ಲಿ ಕಾರಕಾರ್ಥಗಳನ್ನು ಹೇಳುವ ಪದಗಳು ಯಾವವು?

ಉ. ನಾಮಪದಗಳಿಗೂ ಸರ್ವನಾಮಗಳಿಗೂ ಬರುವ ವಿಭಕ್ತಿಗಳಲ್ಲಿ ಪ್ರಥಮೆ, ದ್ವಿತೀಯೆ, ತೃತೀಯೆ, ಚತುರ್ಥಿ, ಸಪ್ತಮಿ, ಈ 5 ವಿಭಕ್ತಿರೂಪಗಳು ಕಾರಕಾರ್ಥಗಳನ್ನು ಹೇಳುತ್ತವೆ. ಅದು ಕಾರಣ ಅವುಗಳಿಗೆ "ಕಾರಕವಿಭಕ್ತಿ"ಗಳೆಂಬ ಹೆಸರು. ಯಾವ ಯಾವ ವಿಭಕ್ತಿಯು ಯಾವ ಯಾವ ಕಾರಕಾರ್ಥಗಳನ್ನು ಹೇಳುವದೆಂದು ಮೇಲಿನ ವಿವರದಲ್ಲಿ ತೋರಿಸಿದ ಪ್ರಶ್ನೆಗಳಿಂದಲೂ ಉದಾಹರಣೆಗಳಿಂದಲೂ ನೋಡಿ ತಿಳಿಯುವದು.

133. ಪ್ರ. ಕಾರಕಾರ್ಥಗಳನ್ನು ಹೇಳುವದಕ್ಕೆ ಇನ್ನು ಯಾವ ಶಬ್ದಗಳು ಪ್ರಯೋಗವಾಗುತ್ತವೆ?

ಉ. ಕಾರಕಪದಗಳೆಂದೆನ್ನಿಸಿ ಕೊಳ್ಳುವ ನಾಮಪದ ಸರ್ವನಾಮಗಳು ಅಲ್ಲದೆ, ಇನ್ನು ಅನೇಕ ಅವ್ಯಯಶಬ್ದಗಳು ಕಾರಕಾರ್ಥಗಳನ್ನು ಹೇಳುತ್ತವೆ. ಆದರೆ ಅವುಗಳಿಗೆ ಕಾರಕಪದಗಳೆನ್ನದೆ "ಕ್ರಿಯಾವಿಶೇಷಣ"ಗಳೆಂದು ಅನ್ನುತ್ತಾರೆ. ಅವುಗಳಲ್ಲಿ ಕೆಲವು ತಮ್ಮಷ್ಟಕ್ಕೆ ಪ್ರಯೋಗಿಸುವಂಥಾವು, ಕೆಲವು ನಾಮಪದಗಳ ವಿಭಕ್ತಿಗೆ ಕೂಡುವ ಉಪಸರ್ಗಗಳು, ಕೆಲವು ಕೃದ್ವಾಚಿಗಳಿಗೆ ಶೇರಿ ಕೊಳ್ಳುವವು.

134. ಪ್ರ. ಕ್ರಿಯಾವಿಶೇಷಣಗಳಾಗಿ ತಮ್ಮಷ್ಟಕ್ಕೆ ಪ್ರಯೋಗಿಸುವ ಅವ್ಯಯ ಶಬ್ದಗಳು ಯಾವವು?

ಉ. ಶಬ್ದಲಕ್ಷಣದಲ್ಲಿ ವಿವರಿಸಿದ 95ನೆ 96ನೆ 97ನೆ ಪ್ರಶ್ನೋತ್ತರಗಳಲ್ಲಿ ತೋರಿಸಿದ ಸ್ಥಳವಾಚಕ, ಕಾಲವಾಚಕ, ರೀತಿವಾಚಕ, ಅವ್ಯಯಗಳು ಕ್ರಿಯೆಗಳ ಸ್ಥಾನ, ಕಾಲ, ರೀತಿಯನ್ನು ವಿಶೇಷಿಸುವದಕ್ಕೆ

ಪ್ರಯೋಗವಾಗುತ್ತವೆ. ಉದಾ. ಇಲ್ಲಿ ನಿಂತನು. ನಾಳೆ ಹೋಗುವನು. ಹೀಗೆ ಮಾಡಿದನು.

135. ಪ್ರ. ಉಪಸರ್ಗಗಳ ಪ್ರಯೋಗವು ಹ್ಯಾಗೆ?

ಉ. ನಾಮಪದಗಳ ಸರ್ವನಾಮಗಳ ವಿಭಕ್ತಿರೂಪಗಳು ಸಾಧಾರಣವಾಗಿ ಹೇಳುವ ಕಾರಕಾರ್ಥಗಳನ್ನು ವಿಶೇಷಿಸಿ ಹೇಳುವದಕ್ಕೆ ಉಪಸರ್ಗಗಳು ಆ ನಾಮಗಳ ಮುಂದೆ ಸೇರುತ್ತವೆ. ಅವು ಯಾವವಂದರೆ:

| | |
|---|---|
| 1. ಕರ್ಮಾರ್ಥವಾಚಕಗಳು— | ವಿಷಯ, ಕುರಿತು. |
| 2. ಮೂಲಾರ್ಥವಾಚಕಗಳು— | ಕಾರಣ, ನಿಮಿತ್ತ, ಉದ್ದಿಶ್ಯ, ಮೂಲವಾಗಿ, ಸಲುವಾಗಿ, ದೆಸೆಯಿಂದ, ಮುಖದಿಂದ, ಕೈಯಿಂದ, ಮುಖಾಂತರ. |
| 3. ಯೋಗಾರ್ಥವಾಚಕಗಳು— | ಓಸ್ಕರ, ಓಸುಗ, ತುಸುಕ, ತನಕ, ಅನಕ, ಪರಿಯಂತರ, ವರಿಗೆ, ಮಟ್ಟಿಗೆ. |
| 4. ಸ್ಥಳಕಾಲಾರ್ಥವಾಚಕಗಳು— | ಒಳಗೆ, ಹೊರಗೆ, ಕೆಳಗೆ, ಮೇಲೆ, ಬಳಿಕ, ತರುವಾಯ, ಹಿಂದೆ, ಮುಂದೆ, ಚೂಣಿ, ಸುತ್ತ, ಹತ್ತರ, ಹತ್ತಿಲಿ, ಬದಿಲಿ, ಬಳಿಯಲ್ಲಿ. |
| 5. ರೀತ್ಯರ್ಥವಾಚಕಗಳು— | ಅಂತೆ, ಹಾಗೆ, ಬಗ್ಗೆ, ಪ್ರಕಾರ, ರೀತಿ, ಮೇರೆ, ಪರಿ, ಓಪಾದಿಯಲ್ಲಿ, ಸಂಗಡ, ಕೂಡ, ಒಡನೆ, ಒಂದಿಗೆ, ವಿನಾ, ಹೊರ್ತು—ಇತ್ಯಾದಿಗಳು. |

ಇವುಗಳಲ್ಲಿ "ಕುರಿತು" ಎಂಬದು ದ್ವಿತೀಯಾವಿಭಕ್ತಿಯ ಮುಂದೆ, "ಓಸ್ಕರ" ಎಂಬದು ಚತುರ್ಥಿವಿಭಕ್ತಿಯ ಮುಂದೆ, ಕಡಿಮೆ ಎಲ್ಲಾ ಷಷ್ಠಿವಿಭಕ್ತಿಯ ಮುಂದೆ ಸೇರುತ್ತವೆ. ಉದಾ. ದೇವರನ್ನು ಕುರಿತು ಪ್ರಾರ್ಥನೆ ಮಾಡು. ತಂದೆತಾಯಿಗಳು ಮಕ್ಕಳಿಗೋಸ್ಕರ ಕಷ್ಟ ಪಡುತ್ತಾರೆ. ಪರಗತಿಯ ವಿಷಯ ಧ್ಯಾನ ಮಾಡು.

136. ಪ್ರ. ಕೃದ್ವಾಚಿಗಳಿಗೆ ಕೇರಿಕೊಳ್ಳುವ ಅವ್ಯಯ ಶಬ್ದಗಳು ಯಾವವು?
ಉ. "ಕಾರಣ, ನಿಮಿತ್ತ; ತನಕ, ಅನಕ, ಪರಿಯಂತರ, ವರಿಗೆ, ಮಟ್ಟಿಗೆ; ಮೇಲೆ, ಬಳಿಕ, ತರುವಾಯ, ಆಚೆ, ಈಚೆ, ಸುತ್ತ; ಅಂತೆ, ಹಾಂಗೆ, ಬಗ್ಯೆ, ಪ್ರಕಾರ" ಇವು ಕೃದ್ವಾಚಿಗಳಿಗೆ ಶೇರಿಕೊಂಡು, ಮೇಲೆ ವಿವರಿಸಿದ ಅರ್ಥಗಳನ್ನು ಹೇಳುತ್ತವೆ. ಉದಾ. ತಪ್ಪು ಮಾಡಿದ ಕಾರಣ ಶಿಕ್ಷೆ ಬರುವದು. ವಿದ್ಯ ಬರುವ ತನಕ ಅಭ್ಯಾಸ ಮಾಡು. ಕೆಡದ ಹಾಗೆ ಎಚ್ಚರಿಕೆಯಾಗಿರು.—ಇದಲ್ಲದೆ "ಅಲ್ಲಿ, ಆಗ, ಆಗ್ಯೆ, ಆಗ್ಯೂ, ರೆ, ರೂ" ಎಂಬವುಗಳು ಕೃದ್ವಾಚಿಗಳಿಗೆ ಶೇರುತ್ತವೆ. ಅವುಗಳಲ್ಲಿ "ಅಲ್ಲಿ" ಎಂಬದು ಸ್ಥಳಕಾಲಾರ್ಥಗಳನ್ನೂ, "ಆಗ" ಎಂಬದು ಕಾಲಾರ್ಥವನ್ನೂ, "ರೆ, ಆಗ್ಯೆ" ಎಂಬವುಗಳು ಪಕ್ಷಾರ್ಥವನ್ನೂ, "ರೂ, ಆಗ್ಯೂ" ಎಂಬವುಗಳು ಪ್ರತಿಪಕ್ಷಾರ್ಥವನ್ನೂ ಹೇಳುತ್ತವೆ.

ಉದಾ. ಪಾಪ ಮಾಡುವಲ್ಲಿ ಕೇಡು ಬರುವದು. ಹಿರಿಯರು ಮಾತನಾಡುವಾಗ ಚಿಕ್ಕವರು ಕೇಳ ಬೇಕು. ಪ್ರಯತ್ನ ಮಾಡಿದರೆ ಫಲವಾಗುವದು. ಕಲಿತವನು ಸಣ್ಣವನಿದ್ದರೂ ಉಪಯೋಗ್ಯನು.

137. ಪ್ರ. ಇನ್ನು ಯಾವ ಪದಗಳು ಕಾರಕಾರ್ಥಗಳನ್ನೂ ಕ್ರಿಯಾವಿಶೇಷಣಾರ್ಥಗಳನ್ನೂ ಹೇಳುತ್ತವೆ?
ಉ. ಅವ್ಯಯಕ್ರಿಯಾಪದಗಳು. ಅವು ಯಾವವಂದರೆ: ಕ್ರಿಯಾನಾಮವಾಚಕಗಳೂ, ಭಾವಾರ್ಥಕರೂಪಗಳೂ, ನ್ಯೂನಗಳೂ; ಹ್ಯಾಗಂದರೆ:—

1. ಕ್ರಿಯಾನಾಮವಾಚಕಗಳು ನಾಮವಾಚಕಗಳಿಗೆ ಸಮಾನವಾಗಿ ವಿಭಕ್ತಿಗಳನ್ನು ಹೊಂದಿ ಕಾರಕಾರ್ಥಗಳನ್ನು ಹೇಳುತ್ತವೆ. ಉದಾ. ವ್ಯಾಪಾರ ನಡಿಸುವದರಿಂದ ಲಾಭ ಬರುವದು. ಐಶ್ವರ್ಯ ದೊರಕಿಸುವದಕ್ಕೆ ಅನೇಕರು ಪ್ರಯತ್ನ ಮಾಡುತ್ತಾರೆ.

2. ಭಾವಾರ್ಥಕ 1ನೆ, 2ನೆ, 3ನೆ ರೂಪಗಳು ಅನೇಕ ಸರ್ತಿ ಕ್ರಿಯಾನಾಮವಾಚಕಗಳ ಪ್ರಥಮೆ, ದ್ವಿತೀಯೆ, ಚತುರ್ಥಿ ವಿಭ

ಕ್ರಿಗಳ ಕಾರಕಾರ್ಥಗಳನ್ನು ಹೇಳುತ್ತವೆ. ಉದಾ. ದೇವರನ್ನು ಕಣ್ಣಿನಿಂದ ನೋಡ ಕೂಡದು, ಆತನನ್ನು ಕೈಯಿಂದ ಮುಟ್ಟ ಲಾಗದು, ಆತನನ್ನು ನಿಶ್ಚಿಸಲಿಕ್ಕೆ ಆತ್ಮದ ಸಾಕ್ಷಿಯೇ ಉಂಟು.

ಇದಲ್ಲದೆ ಭಾವಾರ್ಥಕ 2ನೆ ರೂಪವು ಕಾಲಾರ್ಥವನ್ನು ಹೇಳು ವದಕ್ಕೆ ಪ್ರಯೋಗಿಸುವದು. ಉದಾ. ಸೂರ್ಯನು ಮೂಡಲು ಕತ್ತಲೆ ಓಡಿ ಹೋಯಿತು.

3. ನ್ಯೂನಗಳು ವಾಕ್ಯದಲ್ಲಿ ಮುಂದಣ ಕ್ರಿಯೆಗೆ ಸಂಯುಕ್ತ ವಾದ ಕ್ರಿಯೆಯನ್ನು ಹೇಳುತ್ತವೆ. ಅನೇಕ ಸರ್ತಿ ನ್ಯೂನಕ್ರಿಯೆ ಯು ಮುಂದಣ ಕ್ರಿಯೆಯ ರೀತಿ ಅರ್ಥವನ್ನು ಹೇಳುವದು. ಉದಾ. ನಡಿಯುತ್ತಾ ಬಂದನು. ಓಡಿ ಹೋದನು. ತಿಳಿಯದೆ ಮಾಡಿದನು.—ಕೆಲವು ಸ್ಥಳಗಳಲ್ಲಿ ನ್ಯೂನಕ್ರಿಯೆಯು ಮುಂದಣ ಕ್ರಿಯೆಯ ಮೂಲಾರ್ಥವನ್ನು ಹೇಳುವದು. ಉದಾ. ಘಾಳಿ ಬೀಸಿ ಹಣ್ಣು ಉದುರಿತು. ಹುಡುಗನು ಓದದೆ ಕೆಟ್ಟನು. ಅನ್ನ ತಿಂದು ಮುಗಿಯಿತು. ನೀವು ಬಂದು ಆರು ತಿಂಗಳಾಯಿತು.

"ಆಗಿ" ಎಂಬ ಭೂತನ್ಯೂನವನ್ನು ನಾಮಪದಗಳಿಗೂ, ವಿಶೇಷಣಪದಗಳಿಗೂ ಹಚ್ಚುವದರಿಂದ ಅವುಗಳೆಲ್ಲಾ ರೀತಿ ಅರ್ಥವನ್ನು ಹೇಳುವ ಕ್ರಿಯಾವಿಶೇಷಣಗಳು ಆಗುತ್ತವೆ. ಉದಾ. ಕೂಸಾಗಿ ಹುಟ್ಟಿದೆನು, ತೀವ್ರವಾಗಿ ಬಾಲಕನಾದೆನು, ಎಂಥವನಾಗಿ ಸಾಯುವೆನೊ?

---

### 3. ವಿಶೇಷಣಪ್ರಕರಣ.

138. ಪ್ರ. ವಿಶೇಷಣವೆಂದರೇನು?

ಉ. ಕಾರಕಪದಗಳನ್ನು ವಿಶೇಷಿಸುವ ಶಬ್ದಗಳೇ ವಿಶೇಷಣಗಳು. ವಾಕ್ಯವನ್ನು ಮನುಷ್ಯನ ಶರೀರಕ್ಕೆ ಸಮಾನ ಮಾಡಿದರೆ, ಆಖ್ಯಾತಪದವು ಅದರ ಪ್ರಾಣ, ಕಾರಕಪದಗಳು ಅದರ ಅವಯವಗಳು, ವಿಶೇಷಣಪದಗಳು ಆ ಅವಯವಗಳನ್ನು ಭೂಷಿಸುವ ಆಭರಣಗಳು.

139. ಪ್ರ. ವಿಶೇಷಣಪದಗಳು ಯಾವವು?

ಉ. ಶಬ್ದಲಕ್ಷಣದ 48ನೆ ಉತ್ತರದ 3ನೆ ಅಂಕೆಯಲ್ಲಿ ವಿವರಿಸಿದ ಗಮಕ ಸಮಾಸದಲ್ಲಿ ಪ್ರಯೋಗಿಸುವ (1) ಸರ್ವನಾಮಕ, (2) ಸಂಖ್ಯಾವಾಚಕ, (3) ಗುಣವಾಚಕ, (4) ದಿಗ್ವಾಚಕ, (5) ಕೃದ್ವಾಚಕ, ವಿಶೇಷಣಗಳೇ ಹೊರ್ತು ಇನ್ನು ನಾಮಪದಗಳು (6) ಲುಕ್ಸಮಾಸ, (7) ಅಲುಕ್ಸಮಾಸ* ವಿಶೇಷಣಗಳಾಗಿ ಪ್ರಯೋಗಿಸುವವು.

ಉದಾಹರಣೆಗಳು:

1. (ಪ್ರಶ್ನಾರ್ಥಕ ಸ.) ಯಾವ ಹುಡುಗನು?
   (ನಿದರ್ಶಕ ಸ.) ಈ ಮನೆ. ಆ ಪುಸ್ತಕ.
2. ಇದಕ್ಕೆ ಸಂಬಂಧವಾದ ಉದಾಹರಣೆಗಳನ್ನು 67ನೆ ಪ್ರಶ್ನೆಯ ಉತ್ತರದಲ್ಲಿ ನೋಡು.
3. ದೊಡ್ಡ ಆನೆ. ಒಳ್ಳೆ ಮನುಷ್ಯ.
4. ಮೇಗಣ ಪೇಟೆ. ಕೆಳಗಣ ಶೀಮೆ.
5. ಅಳುವ ಕೂಸು. ಓದುವ ಹುಡುಗ.
6. ಗುರುಬೋಧ. ತತ್ವಜ್ಞಾನ.
7. ಭಂಗಾರದ ಒಡವೆ. ವೀಣೆಯ ಸ್ವರ.

140. ಪ್ರ. ಉಪವಿಶೇಷಣಗಳು ಯಾವವು?

ಉ. (1) ವಿಶೇಷಣಗಳ ಆಧಿಕ್ಯ, (2) ಉಪಮಾನ, (3) ಸಂಬಂಧತ್ವ ಮೊದಲಾದ ವಿಶೇಷಗಳನ್ನು ಹೇಳುವದಕ್ಕೆ ಅವುಗಳ ಹಿಂದೆ ಬೇರೆ ಬೇರೆ ಉಪಪದಗಳು ಶೇರಿದರೆ, ಈ ಉಪಪದಗಳು "ಉಪವಿಶೇಷಣ"ಗಳೆಂದೆನ್ನಿಸುವವು.

ಉದಾಹರಣೆಗಳು:

1. ದೊಡ್ಡ ದೊಡ್ಡ ಆನೆ. ವೊಳ್ಳೆ ವೊಳ್ಳೆ ಸಾವಕಾರ. ಬಹಳ ದೊಡ್ಡ ಮನೆ. ಅತಿ ಶ್ರೇಷ್ಠ ದೇವರು.

---

* ಅಲುಕ್ಸಮಾಸಕ್ಕೆ "ಅಭೇದಸಂಬಂಧ"ವೆಂತಲೂ ಹೇಳುತ್ತಾರೆ.

2. ಎಲ್ಲಾ ಪರ್ವತಗಳಿಗಿಂತ ದೊಡ್ಡ ಪರ್ವತ. ಬೆಟ್ಟದಷ್ಟು ಭಂಗಾರ. ನನ್ನಂಥ ಮನುಷ್ಯ.

3. ಮನುಷ್ಯನ ಮನಸ್ಸಿನ ಆಲೋಚನೆ. ಲೋಕದ ಜನರ ದುಃಖದ ಕಾರಣಗಳು.

## 4. ಅನ್ವಯಪ್ರಕರಣ.

**141.** ಪ್ರ. ಅನ್ವಯವೆಂದರೇನು?

ಉ. ಶಬ್ದಗಳನ್ನು ತಮ್ಮೊಳಗಣ ಪರಸ್ಪರ ಸಂಬಂಧಾನುಸಾರವಾಗಿ ವಾಕ್ಯದಲ್ಲಿ ಪೋಣಿಸುವದೇ "ಅನ್ವಯ"ವೆಂದೆನ್ನಿಸುವದು.

**142.** ಪ್ರ. ಅನ್ವಯವು ಎಷ್ಟು ವಿಧವು?

ಉ. "ಸಾಧಾರಣ ಅನ್ವಯ, ವ್ಯತ್ಯಯ ಅನ್ವಯ", ಈ 2 ವಿಧವು. ಶಬ್ದಗಳ ಅರ್ಥಾನುಸಾರವಾಗಿ ಅವುಗಳನ್ನು ವಾಕ್ಯದಲ್ಲಿ ಅನ್ವಯಿಸುವದೇ "ಸಾಧಾರಣ ಅನ್ವಯ". ಆ ಕ್ರಮವನ್ನು ಬಿಟ್ಟು ಅವುಗಳನ್ನು ಪಲ್ಲಟವಾಗಿ ಅನ್ವಯಿಸುವದೇ "ವ್ಯತ್ಯಯ ಅನ್ವಯ".

**143.** ಪ್ರ. ಸಾಧಾರಣ ಅನ್ವಯದ ವಿಧಿಗಳು ಯಾವವು?

ಉ. 1ನೇದು—ಆಖ್ಯಾತಪದವು ವಾಕ್ಯದ ತುದಿಯಲ್ಲಿ ಶೇರುವದು.

2ನೇದು—ಕಾರಕಪದಗಳೂ ಕ್ರಿಯಾವಿಶೇಷಣಗಳೂ ಆಖ್ಯಾತಪದದ ಪೂರ್ವದಲ್ಲಿ ಶೇರುವವು.

3ನೇದು—ವಿಶೇಷಣಪದಗಳು ಕಾರಕಪದಗಳ ಪೂರ್ವದಲ್ಲಿ ಶೇರುವವು.

4ನೇದು—ಉಪವಿಶೇಷಣಗಳು ವಿಶೇಷಣಗಳ ಪೂರ್ವದಲ್ಲಿ ಶೇರುವವು.

ಉದಾ. ಬಹಳ ದೊಡ್ಡ ಅರಸನು ಸತ್ತನು.

**144.** ಪ್ರ. ಒಂದು ವಾಕ್ಯದಲ್ಲಿ ನಾನಾ ಕಾರಕಾರ್ಥ ಹೇಳುವ ಅನೇಕ ಕಾರಕಪದಗಳೂ ಕ್ರಿಯಾವಿಶೇಷಣಗಳೂ ಇದ್ದರೆ, ಅವುಗಳ ಅನ್ವಯವು ಹ್ಯಾಗೆ?

ಉ. ಒಂದೇ ವಾಕ್ಯದಲ್ಲಿ ಎಲ್ಲಾ ಕಾರಕಾರ್ಥಗಳು ಶೇರುವದು ಅಪೂರ್ವವಾಗಿದೆ. ಶೇರಿದವುಗಳ ಅಧಿಕರಣಗಳ ಕ್ರಮವು ಹ್ಯಾಗಂದರೆ:—
1ನೇದು ಕಾಲವಾಚಕ, 2ನೇದು ಸ್ಥಳವಾಚಕ, 3ನೇದು ಕೃದ್ವಾಚಕ, 4ನೇದು ಮೂಲವಾಚಕ, 5ನೇದು ಯೋಗಾರ್ಥವಾಚಕ, 6ನೇದು ಕರ್ಮವಾಚಕ, 7ನೇದು ರೀತಿವಾಚಕ — ಈ ಪ್ರಕಾರ ಅನ್ವಯವಾಗುತ್ತವೆ.

ಉದಾ. ಆದಿಯಲ್ಲಿ ಭೂಮಿಯ ಮೇಲೆ ಮನುಷ್ಯರು ಭಕ್ತಿಯಿಂದ ದೇವರಿಗೆ ಕಾಣಿಕೆಗಳನ್ನು ಸಂತೋಷವಾಗಿ ಅರ್ಪಿಸಿದರು.—ಪರಂತು ಈ ಕ್ರಮಕ್ಕೆ ನಾನಾವಿಧವಾದ ಅಪವಾದಗಳು ಉಂಟು.

**145.** ಪ್ರ. ಸಮಾನಾಧಿಕರಣ ಶಬ್ದಗಳ ಅನ್ವಯವು ಹ್ಯಾಗೆ?

ಉ. ವಾಕ್ಯದಲ್ಲಿ ಎಷ್ಟು ಶಬ್ದಗಳು ಅದೇ ಕಾರಕಾರ್ಥವನ್ನು ಹೇಳುತ್ತವೋ. ಅವುಗಳೆಲ್ಲಾ ಅದೇ ಅಧಿಕರಣದಲ್ಲಿ ಶೇರಿ, ತಮ್ಮೊಳಗೆ "ಸಮಾನಾಧಿಕರಣ"ವಾಗಿವೆ. ಇಂಥಾ ಸಮಾನಾಧಿಕರಣ ಶಬ್ದಗಳ ಉಭಯವನ್ನಾಗಲಿ ಅನೇಕವನ್ನಾಗಲಿ ಅನ್ವಯಿಸುವದು "ಪದಸಮುಚ್ಚಯ"ವೆಂದೆನ್ನಿಸುವದು.

**146.** ಪ್ರ. ಪದಸಮುಚ್ಚಯು ಎಷ್ಟು ವಿಧವು?

ಉ. "ದ್ವಂದ್ವಸಮಾಸ, ಸಂಗ್ರಹಣ, ಸಮುಚ್ಚಯ", ಈ 3 ವಿಧವು.

**147.** ಪ್ರ. ದ್ವಂದ್ವಸಮಾಸ ಹ್ಯಾಗೆ?

ಉ. ಪ್ರಕೃತಿರೂಪವಾಗಿ ಸಮಾಸವಾದ ಪದಗಳ ಸಮೂಹಕ್ಕೆ ಅದರ ಕೊನೆಯಲ್ಲಿ ವಿಭಕ್ತಿಪ್ರತ್ಯಯವು ಬಂದರೆ, "ದ್ವಂದ್ವಸಮಾಸ"ವೆಂದೆನ್ನಿಸುವದು. ಉದಾ. ಊರು, ದೇಶ, ದ್ವೀಪಗಳಲ್ಲಿ ಆಕಾಶವು ಒಂದೇ.

**148.** ಪ್ರ. ಸಂಗ್ರಹಣ ಹ್ಯಾಗೆ?

ಉ. ಸಮಾನಾಧಿಕರಣವಾದ ಪದಗಳ ಒಂದೊಂದನ್ನು ವ್ಯಕ್ತಿಯಾ

ಗಿ ಹೇಳಿದ ಮೇಲೆ, ಅವುಗಳನ್ನೆಲ್ಲಾ ಸಂಗ್ರಹಿಸುವ ಒಂದು ಸರ್ವನಾಮದಿಂದಾಗಲಿ ಜಾತಿವಾಚಕದಿಂದಾಗಲಿ ಇನ್ನೊಮ್ಮೆ ಸಂಗ್ರಹವಾಗಿ ಹೇಳುವದೇ "ಸಂಗ್ರಹಣ" ವೆಂದೆನ್ನಿಸುವದು. ಉದಾ. ರೊಟ್ಟಿ, ಅನ್ನ, ಹಾಲು, ಮೊಸರು, ಬೆಲ್ಲ, ಇವುಗಳನ್ನು ಸರ್ವರು ಉಣ್ಣುತ್ತಾರೆ. ಒಂದು ಊರಿನಲ್ಲಿ ಒಬ್ಬ ಧೊರೆ, ಅವನ ಪ್ರಧಾನಿ, ಅವನ ಹೆಂಡತಿ, ಅವನ ಮಗನು, ಈ ನಾಲ್ಕು ಜನರಿದ್ದರು.

149. ಪ್ರ. ಸಮುಚ್ಚಯ ಹ್ಯಾಗೆ?
ಉ. ಸಮಾನಾಧಿಕರಣವಾದ ಪದಗಳನ್ನು ಸಮುಚ್ಚಾಯಕ ಅವ್ಯಯಗಳಿಂದ ಕೂಡಿಸಿ ಅನ್ವಯಿಸುವದೇ "ಸಮುಚ್ಚಯಅನ್ವಯ" ವೆಂದೆನ್ನಿಸುವದು. ಆ ಸಮುಚ್ಚಾಯಕಗಳು ಶಬ್ದಲಕ್ಷಣದ 101, 102, 103ನೆ ಪ್ರಶ್ನೋತ್ತರಗಳಲ್ಲಿ ವಿವರಿಸಿ ತೋರಿಸಿ ಅವೆ. ಅವುಗಳೊಳಗೆ, "ಊ" ನಿಪಾತವು ಸಮುಚ್ಚಯಾರ್ಥದಲ್ಲಿ ಬಹಳವಾಗಿ ಪ್ರಯೋಗಿಸುವದು. ಉದಾ. ಭಕ್ತಿಯುಳ್ಳವರೂ, ಸತ್ಯವಂತರೂ, ಜ್ಞಾನಿಗಳೂ ಸಜ್ಜನರಾಗಿದ್ದಾರೆ. ಎಚ್ಚರಿಕೆಯಲ್ಲಿಯೂ, ಕನಸ್ಸಿನಲ್ಲಿಯೂ, ನಿದ್ರೆಯಲ್ಲಿಯೂ, ದೇವರು ನಮ್ಮ ಆಧಾರವಾಗಿದ್ದಾನೆ.

---

## 5. ವಾಕ್ಯಸಮುಚ್ಚಯಪ್ರಕರಣ.

150. ಪ್ರ. ವಾಕ್ಯಸಮುಚ್ಚಯವೆಂದರೇನು?
ಉ. ಒಂದೇ ಆಲೋಚನೆಯನ್ನು ಹೇಳುವ ಹಾಗೆ ಎರಡು ವಾಕ್ಯಗಳನ್ನು ಒಂದಕ್ಕೊಂದು ಶೇರಿಸಿ ಕೂಡಿಸುವದೇ "ವಾಕ್ಯಸಮುಚ್ಚಯ" ವೆಂದೆನ್ನಿಸುವದು.

151. ಪ್ರ. ಸಮುಚ್ಚಯವಾಗುವ ವಾಕ್ಯಗಳು ಯಾವವು?
ಉ. ಒಂದಕ್ಕೊಂದು ಶೇರಿದ ಎರಡು ವಾಕ್ಯಗಳಲ್ಲಿ ಒಂದು ವಾಕ್ಯವು ಮತ್ತೊಂದಕ್ಕೆ ಅಧೀನವಾಗಿದ್ದರೆ, ಆ ಅಧೀನವಾದ ವಾಕ್ಯಕ್ಕೆ

"ಉಪವಾಕ್ಯ"ವೆಂಬ ಹೆಸರು. ಅದರ ಮೇಲೆ ಅಧಿಕಾರ ಹೊಂದಿದ ವಾಕ್ಯಕ್ಕೆ "ಪ್ರಧಾನವಾಕ್ಯ"ವೆಂಬ ಹೆಸರು. ಸಮುಚ್ಚಯವಾದ ಯೆರಡು ವಾಕ್ಯಗಳು ಒಂದಕ್ಕೊಂದು ಅಧೀನವಾಗದಿದ್ದರೆ, ವೊದಲನೇದು "ಪೂರ್ವವಾಕ್ಯ"ವೆಂದು, ಯೆರಡನೇದು "ಪರವಾಕ್ಯ"ವೆಂದೆನ್ನಿಸುವದು.

152. ಪ್ರ. ಉಪವಾಕ್ಯಗಳು ಎಷ್ಟು ವಿಧವು?

ಉ. ಉಪವಾಕ್ಯಗಳು "ಅವ್ಯಯ ಉಪವಾಕ್ಯ, ಆಖ್ಯಾತ ಉಪವಾಕ್ಯ", ಈ ಯೆರಡು ವಿಧವು. ಉಪವಾಕ್ಯದ ಕ್ರಿಯಾಪದವು ಆಖ್ಯಾತರೂಪವಾಗಿದ್ದರೆ, ಆಖ್ಯಾತ ಉಪವಾಕ್ಯವೆಂತಲೂ, ಅದು ಅವ್ಯಯರೂಪವಾಗಿದ್ದರೆ, ಅವ್ಯಯ ಉಪವಾಕ್ಯವೆಂತಲೂ ಅನ್ನತಕ್ಕದ್ದು. ಈ 2 ವಿಧವಾದ ಉಪವಾಕ್ಯಗಳು ತಮ್ಮಷ್ಟಕ್ಕೆ ಆಲೋಚನೆಯನ್ನು ಮುಗಿಸುವ ಬಗ್ಯೆ ಹೇಳದೆ, ಪ್ರಧಾನವಾಕ್ಯದ ಕಾರಕಾರ್ಥಗಳ ವೊಂದನ್ನು ಹೇಳುವವು.

153. ಪ್ರ. ಅವ್ಯಯ ಉಪವಾಕ್ಯಗಳು ಯಾವವು?

ಉ. ಹಿಂದೆ 136—137ನೆ ಪ್ರಶ್ನೋತ್ತರಗಳಲ್ಲಿ ವಿವರಿಸಿದ ಪ್ರಕಾರ, ಕಾರಕಾರ್ಥಗಳನ್ನೂ ಕ್ರಿಯಾವಿಶೇಷಣಾರ್ಥಗಳನ್ನೂ ಹೇಳುವದಕ್ಕೆ ಪ್ರಯೋಗಿಸುವ ಅವ್ಯಯಕ್ರಿಯಾಪದಗಳ ಒಂದಕ್ಕೆ ಸ್ವತಕರ್ತೃವಾಚಕ ಮುಂತಾದ ಕಾರಕಪದಗಳು ಇದ್ದರೆ, ಅದಕ್ಕೆ "ಅವ್ಯಯ ಉಪವಾಕ್ಯ"ವೆಂದು ಅನ್ನ ಬಹುದು.

154. ಪ್ರ. ಆಖ್ಯಾತ ಉಪವಾಕ್ಯಗಳು ಎಷ್ಟು ವಿಧವು?

ಉ. "ಸಂಬಂಧಿತ ಉಪವಾಕ್ಯ, ಸೂಚಿತ ಉಪವಾಕ್ಯ", ಈ 2 ವಿಧವು.

155. ಪ್ರ. ಸಂಬಂಧಿತ ಉಪವಾಕ್ಯಗಳು ಯಾವವು?

ಉ. ಪ್ರಶ್ನಾರ್ಥಕ ಸರ್ವನಾಮ, ಪ್ರಶ್ನಾವಾಚಕ ವಿಶೇಷಣ, ಪ್ರಶ್ನಾರ್ಥಕ ಅವ್ಯಯಶಬ್ದ, ಈ 3 ತರದ ಪ್ರಶ್ನಾಥಕ ಶಬ್ದಗಳಲ್ಲಿ

ಯಾವದಾದರೂ ಉಪವಾಕ್ಯದಲ್ಲಿ ಇರಲಾಗಿ, ಅದಕ್ಕೆ ಪ್ರಧಾನ ವಾಕ್ಯದಲ್ಲಿ ದರ್ಶಕಶಬ್ದ ಯಾವದಾದರೂ ಜೋಡಾಗುವದರಿಂದ, ಪ್ರಧಾನವಾಕ್ಯಕ್ಕೆ ಸಂಬಂಧವಾದ ಉಪವಾಕ್ಯಗಳು "ಸಂಬಂಧಿತ ಉಪವಾಕ್ಯ"ಗಳೆಂದೆನ್ನಿಸುವವು. ಉದಾ. ಯಾವನು ಪಾಪ ಮಾಡುವನೋ, ಅವನು ತಾಪ ಪಡುವನು. ಯೆಂಥವರು ನಿನ್ನ ಗೆಳೆಯರೋ, ಅಂಥವನು ನೀನೇ. ಎರಡನೇಯವರು ನಿನಗೆ ಹ್ಯಾಗೆ ಮಾಡ ತಕ್ಕದ್ದೋ, ಹಾಗೆಯೇ ನೀನು ಅವರಿಗೆ ಮಾಡ ಬೇಕು. ತಂದೆತಾಯಿಗಳು ನಿನಗೆ ಎಷ್ಟು ಉಪಕಾರ ಮಾಡಿದರೋ, ಅಷ್ಟು ಸೇವೆಯನ್ನು ನೀನು ಅವರಿಗೆ ಮಾಡು.

156. ಪ್ರ. ಸೂಚಿತ ಉಪವಾಕ್ಯಗಳು ಯಾವವು?

ಉ. "ಎಂದು, ಎಂಬ, ಎಂಬದು, ಎಂಬದಾಗಿ" ಇವು ಮೊದಲಾದ "ಎನ್ನು (ಅನ್ನು)" ಧಾತುವಿನ ಕ್ರಿಯಾಪದದ ರೂಪಗಳಲ್ಲಿ ಯಾವದಾದರೂ ಉಪವಾಕ್ಯದ ಕೊನೆಯಲ್ಲಿ ಶೇರುವದರಿಂದ, ಪ್ರಧಾನವಾಕ್ಯಕ್ಕೆ ಅಧೀನವಾದ ಉಪವಾಕ್ಯಗಳು "ಸೂಚಿತ ಉಪವಾಕ್ಯ"ಗಳೆಂದೆನ್ನಿಸುವವು. ಉದಾ. ಮನುಷ್ಯರು ಪಾಪ ಮಾಡ ಬಾರದು ಎಂದು ದೇವರು ಅವರ ಹೃದಯದಲ್ಲಿ ಬರೆದಿದ್ದಾನೆ. ಪಾಪಕ್ಕೆ ಆತನು ಕೋಪ ಮಾಡುತ್ತಾನೆ ಎಂಬ ನಿರ್ಣಯವು ನಮ್ಮೆಲ್ಲರ ಮನಸ್ಸಾಕ್ಷಿಯಲ್ಲಿ ತಿಳಿಯುವದು. ಆ ನಿರ್ಣಯವು ನ್ಯಾಯವಾಗಿದೆ ಎಂಬುವದಕ್ಕೆ ಸಜ್ಜನರೆಲ್ಲರು ಒಪ್ಪಿ ಕೊಳ್ಳುತ್ತಾರೆ. ಅದು ಸುಳ್ಳುಕಲ್ಪನೆ ಎಂಬದಾಗಿ ದುಷ್ಟರು ಮಾತ್ರ ಅನ್ನುತ್ತಾರೆ.

157. ಪ್ರ. ಒಂದಕ್ಕೊಂದು ಅಧೀನವಾಗದ ವಾಕ್ಯಗಳು ಸಮುಚ್ಚಯವಾಗುವದು ಹ್ಯಾಗೆ?

ಉ. ಪೂರ್ವವಾಕ್ಯವು ಹೇಳುವ ಆಲೋಚನೆಗೂ, ಪರವಾಕ್ಯವು ಹೇಳುವ ಆಲೋಚನೆಗೂ ಇರುವ ಸಂಬಂಧವನ್ನು ತೋರಿಸುವದ

ಕ್ಕೆ ಎರಡು ವಾಕ್ಯಗಳ ನಡುವಿನಲ್ಲಿ ನಾನಾವಿಧದ ಸಮುಚ್ಚಾಯಕ ಪದಗಳು ಶೇರುತ್ತವೆ. ಅವು ಯಾವವಂದರೆ—

1. ಪೂರ್ವವಾಕ್ಯಕ್ಕೆ ಪರವಾಕ್ಯವನ್ನು ಸಾಧಾರಣವಾಗಿ ಜೋಡಿಸುವಂಥಾವು:

"ಹಾಂಗು, ಇನ್ನು, ಮತ್ತು, ಮೇಲೆ, ಬಳಿಕ, ತರುವಾಯ, ಇದಲ್ಲದೆ, ಅದಾಗಿ, ಹೀಗಾಗಿ, ಹೀಗಿರಲಾಗಿ, ಹೀಗಿರಲಿಕ್ಕಾಗಿ, ಹಾಗಾದರೆ".

2. ಪೂರ್ವವಾಕ್ಯಕ್ಕೆ ಪರವಾಕ್ಯವನ್ನು ವಿವರವಾಗಿ ಕೂಡಿಸುವಂಥಾವು:

"ಅಂದರೆ, ಹ್ಯಾಗಂದರೆ, ಏನಂದರೆ, ಯಾಕಂದರೆ, ಯಾತಕ್ಕಂದರೆ, ಏನು ಕಾರಣವಂದರೆ" ಇತ್ಯಾದಿ.

3. ಪೂರ್ವವಾಕ್ಯಕ್ಕೆ ಪರವಾಕ್ಯವನ್ನು ಇದುರಿಡುವಂಥಾವು:
"ಆದರೆ, ಪರಂತು, ಆದರೂ, ಆದಾಗ್ಯೂ, ಆದ ಕಾಲಕ್ಕೂ, ಇದ್ದರೂ, ಇದ್ದಾಗ್ಯೂ".

4. ಪೂರ್ವವಾಕ್ಯವು ಪರವಾಕ್ಯಕ್ಕೆ ಮೂಲವೆಂದು ಹೇಳುವಂಥಾವು:

"ಆದದರಿಂದ, ಆದಕಾರಣ, ಅದುಕಾರಣ, ಕಾರಣ, ಹೀಗಾದ ಕಾರಣ, ಅದರ ದೆಶೆಯಿಂದ" ಇತ್ಯಾದಿಗಳು. ಇವುಗಳ ಉದಾಹರಣೆಗಳನ್ನು ಪುಸ್ತಕಗಳಲ್ಲಿ ನೋಡ ತಕ್ಕದ್ದು.

---

## 6. ಲೇಖನಪದ್ಧತಿಪ್ರಕರಣ.

158. ಪ್ರ. ಲೇಖನಪದ್ಧತಿ ಎಂದರೇನು?

ಉ. ಕನ್ನಡ ಭಾಷೆಯನ್ನು ಬರೆಯುವದಕ್ಕೆ ವ್ಯವಹರಿಸುವ ರೀತಿಯು "ಲೇಖನಪದ್ಧತಿ" ಎಂದೆನ್ನಿಸುವದು.

159. ಪ್ರ. ಅದು ಎಷ್ಟು ವಿಧವು?

ಉ. "ಸಂಹಿತಪಾಠ, ಕ್ರಮಪಾಠ", ಈ 2 ವಿಧವು. ವಾಕ್ಯದಲ್ಲಿ ಕೂಡಿದ ಪದಗಳನ್ನೆಲ್ಲಾ ಸಂಧಿ ಮಾಡಿ ಎಡೆ ಬಿಡದೆ ಸಂಹಿತವಾಗಿ ಬರೆಯುವ ರೀತಿಯು "ಸಂಹಿತಪಾಠ"ವೆಂದೆನ್ನಿಸುವದು. ಆ ಪದಗಳನ್ನು ಸಂಧಿ ಮಾಡದೆ, ಒಂದೊಂದನ್ನು ಪ್ರತ್ಯೇಕವಾಗಿ ಬರೆಯುವ ರೀತಿಯು "ಕ್ರಮಪಾಠ"ವೆಂದೆನ್ನಿಸುವದು. ಸಂಹಿತಪಾಠದಿಂದ ವಾಕ್ಯದ ಉಚ್ಚಾರಣೆಯು ಸರಳವಾಗುವದು; ಕ್ರಮಪಾಠದಿಂದ ವಾಕ್ಯಾರ್ಥದ ಗ್ರಹಿಕೆಯು ಸುಲಭವಾಗುವದು.

160. ಪ್ರ. ವಾಕ್ಯಾರ್ಥದ ಗ್ರಹಿಕೆಯನ್ನು ಸುಲಭ ಮಾಡುವದಕ್ಕೆ ಪ್ರಯೋಗಿಸುವ ಗುರುತುಗಳು ಯಾವವು?

ಉ. ಸಂಸ್ಕೃತ ಗ್ರಂಥಗಳಲ್ಲಿ ಶ್ಲೋಕಗಳ ಮಧ್ಯದಲ್ಲಿ ಅರ್ಧವಿರಾಮವನ್ನು ( | ), ಶ್ಲೋಕಗಳ ಅಂತ್ಯದಲ್ಲಿ ಪೂರ್ಣವಿರಾಮವನ್ನು ( || ), ಬರೆಯುವ ಪದ್ಧತಿ ಇರುವದು. ಅದರಂತೆ, ಇಂಗ್ಲಿಷ ಗ್ರಂಥಗಳಲ್ಲಿ ಕೆಲವು ಗುರುತುಗಳು ಪ್ರಯೋಗವಾಗಿ ಅವೆ. ಅವುಗಳನ್ನು ಕನ್ನಡದಲ್ಲಿಯೂ ಪ್ರಯೋಗಿಸುವದಕ್ಕೆ ಕೆಲವರು ಆರಂಭ ಮಾಡಿದರು. ಅವು ಯಾವವಂದರೆ:

| | |
|---|---|
| , ಅಲ್ಪವಿರಾಮ. | ! ಸಂಬೋಧನಸಂಜ್ಞೆ. |
| ; ಅರ್ಧವಿರಾಮ. | — ಸಂಯೋಗಸಂಜ್ಞೆ. |
| : ಅಪೂರ್ಣವಿರಾಮ. | = ಸಮಾರ್ಥಕಸಂಜ್ಞೆ. |
| . ಪೂರ್ಣವಿರಾಮ. | " " ವಿಶೇಷಣಸಂಜ್ಞೆ. |
| ? ಪ್ರಶ್ನಾಸಂಜ್ಞೆ. | ( ) ಆವರಣಸಂಜ್ಞೆ. |

ಸಮಾಪ್ತಿ.

# APPENDIX.

## Grammatical Terms, arranged according to the Canarese alphabetical order.

| *Canarese.* | *English.* | Page. |
|---|---|---|
| ಅಕರ್ಮಕಕ್ರಿಯಾಪದ. | Intransitive verb. | 25 |
| ಅಧಿಕರಣವಿಭಕ್ತಿ. | Locative case. | 16 |
| ಅನುಕರಣಾವ್ಯಯ. | Imitative sound. | 37 |
| ಅನುನಾಸಿಕ. | Nasal. | 5 |
| ಅನುಬಂಧಕ್ರಿಯಾಪದ. | Auxiliary verb. | 43 |
| ಅನುಸ್ವಾರ. | The nasal character. | 5 |
| ಅನ್ಯದೇಶಿ. | Foreign word. | 11 |
| ಅನ್ವಯ. | Construction. | 53 |
| ಅಪಾದಾನವಿಭಕ್ತಿ. | Ablative case. | 16 |
| ಅವ್ಯಯಉಪವಾಕ್ಯ. | Incomplete subordinate sentence. | 56 |
| ಅಲ್ಪಪ್ರಾಣ. | Unaspirated consonant. | 5 |
| ಅವ್ಯಯ. | Indeclinable. | 37 |
| ಅವ್ಯಯರೂಪ. | Uninflected form of the verb. | 26 |
| ಅಕ್ಷರಖಂಡ. | Orthography. | 3 |
| ಆಖ್ಯೆ. | Subject. | 40 |
| ಆಖ್ಯಾತರೂಪ. | Inflected form of the verb. | 25 |
| ಆಖ್ಯಾತ. | Predicate. | 40 |
| ಆಗಮ. | Insertion or Augment. | 7 |
| ಆತ್ಮನೇಪದ. | Middle voice. | 44 |
| ಆತ್ಮಾರ್ಥಕಸರ್ವನಾಮ. | Reflexive pronoun. | 20 |
| ಆದೇಶ. | Permutation. | 7 |
| ಉತ್ತಮಪುರುಷ. | First person. | 20 |

| Canarese. | English. | Page. |
|---|---|---|
| ತೃತೀಯೆವಿಭಕ್ತಿ. | Instrumental case. | 16 |
| ದೀರ್ಘ. | Long vowel. | 5 |
| ದೇಶಿ. | Pure Canarese. | 11 |
| ದ್ವಿತೀಯೆವಿಭಕ್ತಿ. | Accusative case. | 16 |
| ಧಾತು. | Root (verbal). | 25 |
| ನಪುಂಸಕಲಿಂಗ. | Neuter gender. | 15 |
| ನಾಮಪದ. | Noun. | 14 |
| ನಿದರ್ಶಕಸರ್ವನಾಮ. | Demonstrative pronoun. | 20 |
| ನಿಪಾತ. | Particle. | 39 |
| ನಿಶ್ಚಯಾರ್ಥಕರೂಪ. | Indicative mood. | 27 |
| ನಿಷೇಧರೂಪ. | Negative mood. | 26 |
| ನ್ಯೂನರೂಪ. | Gerund. | 26 |
| ಪಂಚಮಿವಿಭಕ್ತಿ. | Ablative case. | 16 |
| ಪದಸಮುಚ್ಚಯ. | Connexion of co-ordinate words. | 54 |
| ಪರುಷ. | Hard. | 5 |
| ಪರಿಮಾಣವಾಚಕ. | Quantitative adnoun. | 22 |
| ಪುರುಷ. | Person. | 20 |
| ಪುರುಷಾರ್ಥಕಸರ್ವನಾಮ. | Personal pronoun. | 20 |
| ಪುಲ್ಲಿಂಗ. | Masculine gender. | 15 |
| ಪ್ರಕೃತಿ. | Uninflected word. | 11 |
| ಪ್ರತ್ಯಯ. | Affix. | 11 |
| ಪ್ರಥಮೆವಿಭಕ್ತಿ. | Nominative case. | 16 |
| ಪ್ರಥಮಪುರುಷ. | Third person. | 20 |
| ಪ್ರಧಾನವಾಕ್ಯ. | Principal sentence. | 56 |
| ಪ್ರಶ್ನಾರ್ಥಕಸರ್ವನಾಮ. | Interrogative pronoun. | 20 |
| ಪ್ರೇರಣಾರ್ಥಕಕ್ರಿಯಾಪದ. | Causative verb. | 25 |

# SECOND CATECHISM

OF

# CANARESE GRAMMAR

# ಕನ್ನಡ ಬಾಲವ್ಯಾಕರಣ

---

ದ್ವಿತಿಯ ಪ್ರಶ್ನೋತ್ತರಸಂವಾದ

ಐದನೇ ಛಾಪೆ

MANGALORE
PRINTED BY PLEBST & STOLZ, BASEL MISSION PRESS
1867

